# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ನವೆಂಬರ್ ೬, ೨೦೧೪ (ಕಾರ್ತೀಕ ೧೫, ಶಕ ವರ್ಷ ೧೯೩೬)<br>Bangalore, Thursday, November 6, 2014 (Karthika 15, Shaka Varsha 1936) | ಸಂಚಿಕೆ ೪೪<br>Issue 44 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಸಿಆಸುಇ 69 ಕೆಇವಿ 2014 ಬೆಂಗಳೂರು, ದಿನಾಂಕ: 21.07.2014.**

ಶ್ರೀಮತಿ ರಾಜಮ್ಮ ಎ. ಚೌಡರೆಡ್ಡಿ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ಕಾರ್ಯದರ್ಶಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು (ಪ್ರಸ್ತುತ ಅಮಾನತ್ತಿನಲ್ಲಿ), ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭಿಯೋಜನಾ ಮಂಜೂರಾತಿಯನ್ನು ನೀಡಿ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಕೆಇವಿ 2014, ದಿನಾಂಕ: 10.07.2014ರ ಆದೇಶದ ಪ್ರಸ್ತಾವನೆಯ ಭಾಗದ ಪುಟ–4 ರ 2ನೇ ಕಂಡಿಕೆಯ 7ನೇ ಸಾಲಿನಲ್ಲಿ "ಪ್ರಕರಣದಲ್ಲಿನ ಧ್ವನಿ ಪರೀಕ್ಷಾ ತಜ್ಞರು ನೀಡಿರುವ ವರದಿಯನ್ವಯ" **ಎಂಬುದರ ಬದಲಾಗಿ** "ಪ್ರಕರಣದಲ್ಲಿನ ಧ್ವನಿ ಪರೀಕ್ಷಾ ಕುರಿತಂತೆ ಆಯುಕ್ತರು, ಬಿ.ಡಿ.ಎ. ಬೆಂಗಳೂರು, ಇವರು ನೀಡಿರುವ ವರದಿಯನ್ವಯ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಬಗಾದಿ ಗೌತಮ್**

ಸರ್ಕಾರದ ಉಪ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು).

**PR. 628**

**SC-25**

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಲ್.ಎಸ್. ಚಂದ್ರಶೇಖರರಾವ್. ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟದ ಸರ್ಕಾರ ಸಚಿವಾಲಯ ಇವರ ವಿರುದ್ಧದ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ನೋಟೀಸ್ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ: 22.05.2012.
2. ಅಧಿಕಾರಿಯವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 20.06.2012,
3. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ: 23.11.2012.
4. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ: 29.07.2013.
5. ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿ ದಿನಾಂಕ: 10.10.2013.
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ:7 .12.2013.
7. ಅಧಿಕಾರಿಯವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 15.03.2014.
8. ಸರ್ಕಾರದ ಪತ್ರ ಸಂಖ್ಯೆ ಸಿಆಸುಇ 17 ಸೇಇವಿ 2011, ದಿನಾಂಕ: 19.06.2014.
9. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ದಿನಾಂಕ: 14.07.2014ರ ಪತ್ರ ಸಂಖ್ಯೆ ಪಿಎಸ್‌ಸಿ 89 ಸಿಎನ್‌ಎಸ್ 2014.

**ಪ್ರಸ್ತಾವನೆ :**

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಸಿ.ಆ.ಸು.ಇ. (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ–1) ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರಾಜಕೀಯ ವಿಶ್ರಾಂತಿ ವೇತನ (ಎ ಮತ್ತು ಬಿ) ಶಾಖೆಗಳಿಗೆ ಸಂಬಂಧಿಸಿದಂತೆ 'ಬಿ', 'ಸಿ' ಮತ್ತು 'ಡಿ' ವೃಂದದಲ್ಲಿ ಮುಕ್ತಾಯಗೊಂಡ ಸುಮಾರು 2100 ಕಡತಗಳನ್ನು ಸಾರ್ವತ್ರಿಕ ದಾಖಲೆಗಳ ವಿಭಾಗಕ್ಕೆ ರವಾನಿಸದೆ ಅವುಗಳನ್ನು ಶಾಖೆಯ ಹಂತದಲ್ಲಿಯೇ ನಾಶಗೊಳಿಸಿ ಸಚಿವಾಲಯ ಕೈಪಿಡಿಯ ಕಂಡಿಕೆ 244 ಮತ್ತು 252ರ ಸೂಚನೆಗಳನ್ನು ಪಾಲಿಸದೆ ಕರ್ತವ್ಯ ಲೋಪ ಎಸಗಿ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) 1957ರ ನಿಯಮಾವಳಿಗಳ ನಿಯಮ 11 ರನ್ವಯ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 22.5.2012ರ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಸರ್ಕಾರದಿಂದ ಜಾರಿಗೊಳಿಸಲಾದ ನೋಟೀಸ್‌ಗೆ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 20.06.2012ರ ತಮ್ಮ ಪ್ರತಿರಕ್ಷಣಾ ಹೇಳಿಕೆಯಲ್ಲಿ ತಮ್ಮ ವಿರುದ್ಧದ ಆರೋಪವನ್ನು ಕೈಬಿಡುವಂತೆ ಕೋರಿರುತ್ತಾರೆ. ಆದರೆ ಆರೋಪಿಯ ಅಧಿಕಾರಿಯವರ ವಿರುದ್ಧ ಹೊರಿಸಲಾಗಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ದೃಷ್ಟಿಯಿಂದ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 23.11.2012ರ ಸರ್ಕಾರದ ಆದೇಶದಲ್ಲಿ ಪ್ರಕರಣದ ವಿಚಾರಣೆ ನಡೆಸಲು ಶ್ರೀ ಹೆಚ್.ಆರ್.ಸುಧೀರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿತ್ತು.

ಆದರೆ ಶ್ರೀ ಹೆಚ್.ಆರ್.ಸುಧೀರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿದ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹಿಂದೆ ನೇಮಿಸಲಾಗಿದ್ದ ವಿಚಾರಣಾಧಿಕಾರಿಯವರನ್ನು ಬದಲಿಸಿ, ಪ್ರಕರಣದ ವಿಚಾರಣೆ ನಡೆಸಲು ಶ್ರೀ ವಿ.ಪಿ. ಜಹಗೀರ್‌ದಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಆಡಳಿತ ಸುಧಾರಣೆ–ರಾಜಕೀಯ ವಿಶ್ರಾಂತಿ ವೇತನ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಅದರಂತೆ ಪ್ರಕರಣದ ಸಮಗ್ರ ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:10.10.2013ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯವರ ವಿರುದ್ಧ ಹೊರಿಸಲಾಗಿದ್ದ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುತ್ತವೆ ಎಂದು ನಿರ್ಣಯಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ:7.12.2013ರ 2ನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಯವರಿಗೆ ಜಾರಿ ಮಾಡಿ ವಿಚಾರಣಾ ವರದಿಯ ಬಗ್ಗೆ ತಮ್ಮ ಹೇಳಿಕೆಯನ್ನು 15 ದಿವಸಗಳ ಒಳಗಾಗಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರು ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ:15.03.2014ರ ಪತ್ರದಲ್ಲಿ ತಮ್ಮ ವಿವರಣೆಯನ್ನು ಸಲ್ಲಿಸಿದ್ದು, ಶಾಖೆಗಳಲ್ಲಿನ ಕಡತಗಳ ವಿಲೇವಾರಿಯ ಕರ್ತವ್ಯವು ಶಾಖಾಧಿಕಾರಿಗಳದ್ದಾಗಿದ್ದು ತಮ್ಮ ಕರ್ತವ್ಯದ ಅವಧಿಯಲ್ಲಿ ಮುಕ್ತಾಯಗೊಂಡ ಯಾವುದೇ ವೃಂದದ ಕಡತಗಳನ್ನು ನಾಶ ಪಡಿಸಲಾಗುವುದಿಲ್ಲವೆಂದು ತಿಳಿಸುತ್ತಾ, ಸಾರ್ವತ್ರಿಕ ದಾಖಲೆಗಳ ವಿಭಾಗವು ಆಯಾ ಇಲಾಖೆಗಳ 'ಬಿ' ಮತ್ತು 'ಸಿ' ವೃಂದದ ಕಡತಗಳನ್ನು ಇಲಾಖೆಗಳಿಗೆ ಕಳುಹಿಸಿ ಅವುಗಳನ್ನು ಪರಿಶೀಲಿಸಿ ಅವಶ್ಯಕತೆ ಇರುವ ಕಡತಗಳನ್ನು ಮಾತ್ರವೇ ದಾಖಲೆಗಳ ವಿಭಾಗಕ್ಕೆ ಮರಳಿ ಕಳುಹಿಸುವಂತೆ ಹಾಗೂ ಅವಧಿ ಮೀರಿರುವ ಕಡತಗಳನ್ನು ಇಲಾಖೆಯ ಹಂತದಲ್ಲಿಯೇ ನಾಶ ಪಡಿಸುವಂತೆ ಸೂಚಿಸಿ ಕಳುಹಿಸಿದ್ದ ಕಡತಗಳ ಬಗ್ಗೆ ಹಿಂದಿನ ಯಾವುದೇ ಅಧೀನ ಕಾರ್ಯದರ್ಶಿ/ಶಾಖಾಧಿಕಾರಿಗಳು ಕ್ರಮ ಕೈಗೊಳ್ಳದೇ ಇದ್ದುದರಿಂದ ಶಾಖೆಯಲ್ಲಿ ಕಡತಗಳು ಹೆಚ್ಚಾಗಿದ್ದುದರಿಂದ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಸಲಹೆ–ಸೂಚನೆಗಳ ಮೇರೆಗೆ ಹಾಗೂ ಸಿಬ್ಬಂದಿ ಸಭೆಯಲ್ಲಿ ತೀರ್ಮಾನಿಸಿದ ಮೇರೆಗೆ ಅವಧಿ ಮೀರಿದ ಹಾಗೂ ಅವಶ್ಯಕತೆ ಇಲ್ಲದಿರುವ ಕಡತಗಳನ್ನು ಮಾತ್ರವೇ ನಾಶಪಡಿಸಲಾಗಿದೆಯೆಂದು ತಿಳಿಸುತ್ತಾ, ಈ ಹಂತದಲ್ಲಿ ಸರ್ಕಾರಕ್ಕೆ ಅಧಿಕವಾಗಿ ಆರ್ಥಿಕ ನಷ್ಟವುಂಟು ಮಾಡಿದ ಅಧಿಕಾರಿ / ನೌಕರರುಗಳ ಪ್ರಕರಣವು ಬೆಳಕಿಗೆ ಬಂದಿದ್ದು, 'ಬಿ' ಮತ್ತು 'ಸಿ' ವೃಂದದ ಕಡತಗಳಲ್ಲಿ ಅವಧಿ ಮೀರಿದ ಹಾಗೂ ಅವಶ್ಯಕತೆಯಿಲ್ಲದೆ ಕಡತಗಳನ್ನು ಮಾತ್ರವೇ ನಾಶಪಡಿಸಿ ಉಳಿದವುಗಳನ್ನು ಅಭಿಲೇಖನಾಲಯಕ್ಕೆ ಕಳುಹಿಸಿದ ಕಾರಣದಿಂದಲೇ ಸರ್ಕಾರದಲ್ಲಿ ನಡೆದಿರುವ ಅತಿ ದೊಡ್ಡ ಮಟ್ಟದ ಭ್ರಷ್ಟಾಚಾರದ ಪ್ರಕರಣವನ್ನು ಬೆಳಕಿಗೆ ತಂದ ತಮಗೆ ಪ್ರಶಂಸಾ ಪತ್ರವನ್ನು ನೀಡುವ ಬದಲು ಇಲಾಖಾ ವಿಚಾರಣೆಯನ್ನು ಆರಂಭಿಸಿರುವುದು ತಮಗೆ ಮುಂಬಡ್ತಿ ನೀಡಬಾರದೆಂಬ ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಕೈವಾಡವನ್ನು ಸೂಚಿಸುತ್ತದೆಯೆಂದು ತಿಳಿಸುತ್ತಾ, ಈ ಪ್ರಕರಣದಲ್ಲಿ ಯಾವುದೇ ರೀತಿಯಲ್ಲೂ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲ ಹಾಗೂ ತಮ್ಮ ನಡತೆಯ ಭ್ರಷ್ಟತೆ ಉಂಟಾಗಿರುವುದಿಲ್ಲವೆಂದು ತಿಳಿಸಿ ತಮ್ಮ ವಿರುದ್ಧದ ಆರೋಪವನ್ನು ಕೈಬಿಟ್ಟು ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುತ್ತವೆಂದು ವಿಚಾರಣಾಧಿಕಾರಿಗಳು ನೀಡಿರುವ ಅಭಿಪ್ರಾಯ ಹಾಗೂ ಆಪಾದಿತ ಅಧಿಕಾರಿಯವರು 2ನೇ ಕಾರಣ ಕೇಳುವ ನೋಟೀಸ್‌ಗೆ ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಸದರಿಯವರು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಅವರನ್ನು ಆರೋಪಮುಕ್ತಗೊಳಿಸಲು ಪರಿಗಣಿಸುವಂತಹ ಯಾವುದೇ ಪೂರಕ ದಾಖಲೆಗಳು ಹಾಗೂ ಅಂಶಗಳು ಕಂಡು ಬಂದಿಲ್ಲವಾದ್ದರಿಂದ ಸದರಿ ಆಪಾದಿತ ಅಧಿಕಾರಿಯವರು ಕರ್ತವ್ಯ ಲೋಪ ಎಸಗಿರುವುದನ್ನು ಮನಗಂಡು ಎಸಗಿರುವ ಕರ್ತವ್ಯಲೋಪವು ಗಂಭೀರ ಸ್ವರೂಪವಾದ ಲೋಪವೆಂದು ಪರಿಗಣಿಸಿ, ಶ್ರೀ ಎಲ್.ಎಸ್. ಚಂದ್ರಶೇಖರರಾವ್, ಅಧೀನ ಕಾರ್ಯದರ್ಶಿ, ಇವರು ದಿನಾಂಕ: 31.10.2012ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಕ.ನಾ.ಸೇ. ನಿಯಮಾವಳಿಗಳು 1958ರ ನಿಯಮ 214 ರಡಿ ಆರೋಪಿತ ಅಧಿಕಾರಿಯವರ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ. 2,000/– ಗಳನ್ನು ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿದ ಸರ್ಕಾರವು ಸದರಿ ಪ್ರಸ್ತಾವನೆಗೆ ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ದಿನಾಂಕ: 19.06.2014ರ ಪತ್ರದಲ್ಲಿ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ದಿನಾಂಕ: 14.07.2014ರ ಪತ್ರ ಸಂಖ್ಯೆ ಪಿಎಸ್‌ಸಿ 89 ಸಿಎನ್‌ಎಸ್ 2014ರಲ್ಲಿ ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರಿಗೆ ಸರ್ಕಾರವು ಪ್ರಸ್ತಾಪಿಸಿದ್ದ ದಂಡನೆಯನ್ನು ವಿಧಿಸಲು ತನ್ನ ಸಹಮತಿಯನ್ನು ನೀಡಿರುತ್ತದೆ.

ಅದರಂತೆ ಸರ್ಕಾರವು ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರಿಗೆ ದಂಡನೆ ವಿಧಿಸಲು ತೀರ್ಮಾನಿಸಿ ಸಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 17 ಸೇಇವಿ 2011 ಬೆಂಗಳೂರು, ದಿನಾಂಕ 31ನೇ ಜುಲೈ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕ.ನಾ.ಸೇ. ನಿಯಮಾವಳಿಗಳು 1958ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್.ಎಸ್. ಚಂದ್ರಶೇಖರರಾವ್, ನಿವೃತ್ತ ಅಧೀನ ಕಾರ್ಯದರ್ಶಿ ಇವರು ಎಸಗಿರುವ ಗಂಭೀರ ಸ್ವರೂಪದ ಕರ್ತವ್ಯಚ್ಯುತಿಗೆ ಸದರಿಯವರಿಗೆ ಅವರ ವಿಶ್ರಾಂತಿ ವೇತನದಲ್ಲಿ ಮಾಹೆಯಾನ ರೂ. 2,000/-ಗಳನ್ನು (ಎರಡು ಸಾವಿರ ರೂಪಾಯಿಗಳು ಮಾತ್ರ) ಆದೇಶ ಹೊರಡಿಸಿದ ದಿನಾಂಕದಿಂದ 5 ವರ್ಷಗಳ ಅವಧಿಯವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಮಹಾಲೇಖಪಾಲರು (ಎ ಮತ್ತು ಇ), ಕರ್ನಾಟಕ, ಬೆಂಗಳೂರು ಇವರು ಈ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6).

PR. 629

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಇಂಧನ ಇಲಾಖೆಯ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸಸಿವಿ 2000; ದಿನಾಂಕ: 22.12.2000.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 60 ಸಸಿವಿ 2002; ದಿನಾಂಕ: 23.11.2002.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 290 ಸಅಸೇ 2011; ದಿನಾಂಕ: 06.09.2011.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಇಂಧನ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ACS/Energy/46/2014, ದಿನಾಂಕ: 28.02.2014
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಇಂಧನ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ACS/Energy/56/2014, ದಿನಾಂಕ: 20.03.2014.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಇಂಧನ ಇಲಾಖೆಯ ವಿಶೇಷ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ಮುಂದುವರಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ವಿಶೇಷ ಕಾರ್ಯದರ್ಶಿ, ಇಂಧನ ಇಲಾಖೆ ಹುದ್ದೆಯನ್ನು ವಿಶೇಷ ಕಾರ್ಯದರ್ಶಿ/ಅಪರ ಕಾರ್ಯದರ್ಶಿ/ನಿರ್ದೇಶಕರು ಹುದ್ದೆಯೆಂದು ದಿನಾಂಕ:15.12.2010 ರಿಂದ ಜಾರಿಗೆ ಬರುವಂತೆ ದಿನಾಂಕ: 31.03.2012 ರವರೆಗೆ ಈ ಕೆಳಕಂಡ ಪೂರಕ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಭಾಷಾಂತರಕಾರರು | 1 ಹುದ್ದೆ |
| 2 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3 | ಕಿರಿಯ ಸಹಾಯಕರು | 1 ಹುದ್ದೆ |
| 4 | ವಾಹನ ಚಾಲಕ | 1 ಹುದ್ದೆ |
| 5 | ದಲಾಯತ್ | 2 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇಂಧನ ಇಲಾಖೆ ಇವರು ಸರ್ಕಾರದ ವಿಶೇಷ ಕಾರ್ಯದರ್ಶಿ, ಇಂಧನ ಇಲಾಖೆ ಹುದ್ದೆಯು 2012 ರಲ್ಲಿ ಮುಕ್ತಾಯವಾಗಿದ್ದು ಸದರಿ ಹುದ್ದೆಯನ್ನು ಪುನರುಜ್ಜೀವಿತಗೊಳಿಸುವಂತೆ ಕೋರಿರುತ್ತಾರೆ.

ಮುಂದುವರೆದು, ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇಂಧನ ಇಲಾಖೆ ಇವರು ಇಂಧನ ಇಲಾಖೆಯ ಹಿತಾಸಕ್ತಿಗಾಗಿ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಪುನರುಜ್ಜೀವಿತಗೊಳಿಸಿ ಮುಂದುವರೆಸಲು ಈ ಕೆಳಕಂಡ ಅಂಶಗಳೊಂದಿಗೆ ಸಮರ್ಥನೆ ನೀಡಿರುತ್ತಾರೆ.

i) ಇಂಧನ ಇಲಾಖೆಯ ಪ್ರಸ್ತುತ ಅಪರ ಮುಖ್ಯಕಾರ್ಯದರ್ಶಿಯವರ ನೇತೃತ್ವದಲ್ಲಿದ್ದು ಇವರ ಅಧೀನದಲ್ಲಿ ಒಬ್ಬರು ಉಪಕಾರ್ಯದರ್ಶಿ ಹಾಗೂ ಒಬ್ಬರು ಅಧೀನ ಕಾರ್ಯದರ್ಶಿಗಳು ಮಾತ್ರ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ii) ಇಂಧನ ಇಲಾಖೆಯ ಅಪರ ಮುಖ್ಯಕಾರ್ಯದರ್ಶಿಗಳು/ ಪ್ರಧಾನ ಕಾರ್ಯದರ್ಶಿಗಳು ಬಹುತೇಕ ಸಮಯವನ್ನು ಭಾರತ ಸರ್ಕಾರದ ಇಂಧನ ಇಲಾಖೆ, ಕಲ್ಲಿದ್ದಲು ಇಲಾಖೆ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಾರ್ಯಗಳಿಗೆ ಸಂಬಂಧಿಸಿದಂತೆ ನಡೆಯುವ ಮುಖ್ಯ ಸಭೆಗಳಿಗೆ ಹಾಗೂ ಇಂಧನ ಇಲಾಖೆಗೆ ಸಂಬಂಧಿಸಿದ ರಾಜ್ಯ ಸರ್ಕಾರದ ಸಭೆಗಳಿಗೆ ಹಾಗೂ ರಾಜ್ಯ ವಿಧಾನ ಮಂಡಲದ ಸಮಿತಿಗಳ ಸಭೆಗಳಿಗೆ ತುರ್ತಾಗಿ

ಹಾಜರಾಗಬೇಕಾಗುತ್ತದೆ. ಇದಲ್ಲದೆ ಕರ್ನಾಟಕ ವಿದ್ಯುತ್ ನಿಯಂತ್ರಣ ಮಂಡಳಿ(ಕೆ.ಇ.ಆರ್.ಸಿ)ಯೊಂದಿಗೆ ನೇರವಾಗಿ ಸಮನ್ವಯಗೊಳಿಸುವ ಕಾರ್ಯಗಳನ್ನು ಹಾಗೂ ಮಂಡಳಿಗಳ ಸಭೆಗಳಿಗೆ ಅನೇಕ ಸೌಲಭ್ಯಗಳ ಬಗ್ಗೆ ಮಾಹಿತಿ ನೀಡಬೇಕಾಗಿರುತ್ತದೆ.

iii) ಇಂಧನ ಇಲಾಖೆಯಲ್ಲಿ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಿದಲ್ಲಿ ಸಚಿವಾಲಯದಲ್ಲಿ ಪ್ರಸ್ತುತ ಇರುವ ಅಧಿಕಾರಿಗಳ ನಡುವಿನ ಹಂತಗಳನ್ನು ಕಡಿಮೆಗೊಳಿಸಬಹುದಾಗಿದ್ದು, ಇಂಧನ ಇಲಾಖೆಯಲ್ಲಿ ಜಾರಿಗೊಳಿಸಬಹುದಾದ ಬಹು ಮುಖ್ಯ ಯೋಜನೆಯಗಳ ಕಾಲಕಾಲಕ್ಕೆ ಅನುಸರಿಸು ಸಂಪೂರ್ಣವಾಗಿ ಪುನರ್‌ಪರಿಶೀಲಿಸಲು ನೆರವಾಗುತ್ತದೆ. ಮುಂದುವರೆದು, ವಿಶೇಷ ಕಾರ್ಯದರ್ಶಿಯೂ ಯಾವಾಗಲೂ ಕೇಂದ್ರ ಕ್ಷೇತ್ರದಲ್ಲಿ ಲಭ್ಯವಿರುವುದರಿಂದ, ಇವರ ಸಹಾಯ, ನೆರವು ಹಾಗೂ ಸಮನ್ವಯದಿಂದಾಗಿ ಕೆ.ಪಿ.ಸಿ.ಎಲ್, ಕೆ.ಪಿ.ಟಿ.ಸಿ.ಎಲ್ ಮತ್ತು ವಿವಿಧ ಎಸ್ಕಾಂಗಳ ವಿದ್ಯುತ್ ಪೂರೈಕೆಯಲ್ಲಿ ದಕ್ಷತೆ ಹಾಗೂ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಕೆಯ ಕುರಿತು ದೈನಂದಿನ ಪ್ರಗತಿಗಳ ಆಗುಹೋಗುಗಳ ಬಗ್ಗೆ ನಿರಂತರವಾಗಿ ಪರಿಶೀಲಿಸಲು ವಿಶೇಷ ಕಾರ್ಯದರ್ಶಿಯು ಇಂಧನ ಇಲಾಖೆಯ ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಗಳಿಗೆ ನೆರವಾಗುತ್ತಾರೆ.

ಇಂಧನ ಇಲಾಖೆಯ ಕಾರ್ಯಕ್ಷೇತ್ರಗಳ ಅಗಾಧತೆಯನ್ನು ಪರಿಗಣಿಸಿ, ಇಂಧನ ಇಲಾಖೆಯ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಕನಿಷ್ಠ ಎರಡು ವರ್ಷಗಳ ಅವಧಿಗೆ ಪುನರುಜ್ಜೀವಿತಗೊಳಿಸುವುದು ಸೂಕ್ತವಾಗಿರುತ್ತದೆ ಎಂದು ಸಮರ್ಥನೆ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 77 ಸಲುಸೇ 2014, ಬೆಂಗಳೂರು, ದಿನಾಂಕ: 05ನೇ ಆಗಸ್ಟ್, 2014.**

ಕರ್ನಾಟಕ ಸರ್ಕಾರ ಸಚಿವಾಲಯದ ಇಂಧನ ಇಲಾಖೆಯ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 646 ವೆಚ್ಚ-12/2014, ದಿನಾಂಕ: 23.07.2014 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

**P.R: 630**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ದತಿ (TPDS) ಯಡಿ ಬೆಳಗಾವಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆನಾಸ 144 ಡಿಆರ್‌ಎ 2013, ದಿನಾಂಕ : 26-10-2013.
2. ಬೆಳಗಾಂ ಜಿಲ್ಲಾ ಉಸ್ತುವಾರಿ ಸಚಿವರ ಪತ್ರ ಸಂ : ಅಸ/546/2013, ದಿನಾಂಕ : 05-06-2014.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 26-10-2013ರ ಆದೇಶದಲ್ಲಿ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಬೆಳಗಾಂ ಜಿಲ್ಲಾ ಉಸ್ತುವಾರಿ ಸಚಿವರು ಬೆಳಗಾಂ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವಂತೆ ಕೋರಿ ಸಮಿತಿಯ ಸರ್ಕಾರೇತರ ಸದಸ್ಯರುಗಳ ಶಿಫಾರಸ್ಸು ಪಟ್ಟಿಯನ್ನು ಸಲ್ಲಿಸಿರುತ್ತಾರೆ.

ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 346 ಡಿಆರ್‌ಎ 2014, ಬೆಂಗಳೂರು, ದಿನಾಂಕ : 25 ಆಗಸ್ಟ್ 2014.**

ಬೆಳಗಾಂ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಿದೆ.

| | | | |
|---|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – | ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – | ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – | ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – | ಸದಸ್ಯರು |
| 5. | ಶ್ರೀ ಪಾಂಡುರಂಗ ಲಕ್ಷ್ಮಣ ಮನ್ನಿಕೇರಿ<br>ಸಾ: ವಡೇರಹಟ್ಟಿ, ತಾ: ಗೋಕಾಕ, ಬೆಳಗಾಂ ಜಿಲ್ಲೆ | – | ಅಧಿಕಾರೇತರ ಸದಸ್ಯರು |
| 6. | ಶ್ರೀ ಮಹಮ್ಮದ್ ಹನೀಫ್ ಅಬುತಾಯಕರ ಸುತಕಟ್ಟಿ,<br>ಸಾ: ಕಿತ್ತೂರು, ತಾ: ಬೈಲಹೊಂಗಲ, ಬೆಳಗಾಂ ಜಿಲ್ಲೆ | – | ಅಧಿಕಾರೇತರ ಸದಸ್ಯರು |
| 7. | ಶ್ರೀ ಶ್ರಿಶೈಲ್ ಪರಸಪ್ಪಾ ತೂಗಶೆಟ್ಟಿ,<br>ಸಾ: ಮೂಳೆ, ತಾ: ಅಥಣಿ, ಬೆಳಗಾಂ ಜಿಲ್ಲೆ | – | ಅಧಿಕಾರೇತರ ಸದಸ್ಯರು |
| 8. | ಶ್ರೀಮತಿ ಸುನೀತಾ ಶಿವಲಿಂಗ ಹರಿಜನ<br>ಮುಕ್ಕಾಂ ಪೋಸ್ಟ್, ಅಜಮ್‌ನಗರ, 5ನೇ ಅಡ್ಡ ರಸ್ತೆ,<br>7-ಡೇಸ್ ಸ್ಕೂಲ್ ಎದುರುಗಡೆ, ಬೆಳಗಾಂ ಜಿಲ್ಲೆ | – | ಅಧಿಕಾರೇತರ ಸದಸ್ಯರು |

9. ಶ್ರೀಮತಿ ಶಹಜಾನ್ ಬಿ. ಗುಲಾಬ್ ಗಡೇಕಾಯಿ, – ಅಧಿಕಾರೇತರ ಸದಸ್ಯರು
ಸಾ: ಹೆಬ್ಬಾಳ, ತಾ: ಹುಕ್ಕೇರಿ, ಬೆಳಗಾಂ ಜಿಲ್ಲೆ
10. ಉಪ ನಿರ್ದೇಶಕರು, ಆನಾಸ ಇಲಾಖೆ, ಬೆಳಗಾಂ ಜಿಲ್ಲೆ – ಸದಸ್ಯ ಕಾರ್ಯದರ್ಶಿ

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು :**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಳ off take ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು :**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ. ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ (ಆಹಾರ-1 & 2).

**P.R. 670**
**SC-200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಿರುವ ಭತ್ತವನ್ನು ಅಕ್ಕಿ ಗಿರಣಿಗಳ ಮೂಲಕ ಹಲ್ಲಿಂಗ್ ಮಾಡಿಸುವ–ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆನಾಸ 29 ಆರ್‌ಪಿಆರ್ 2013, ದಿನಾಂಕ : 19–11–2013.
2. ಕರ್ನಾಟಕ ಅಗತ್ಯವಸ್ತುಗಳ ಪರವಾನಗಿ ಆದೇಶ, 1986.
3. ಕರ್ನಾಟಕ ಅಗತ್ಯವಸ್ತುಗಳ ಪರವಾನಗಿ (ತಿದ್ದುಪಡಿ) ಆದೇಶ ಸಂಖ್ಯೆ : ಆನಾಸ : 29 : ಆರ್‌ಪಿಆರ್ : 2013, ದಿನಾಂಕ : 10–07–2014.
4. ಕಸ್ಟಂ ಮಿಲ್ಲಿಂಗ್ ಭತ್ತವನ್ನು ಹಲ್ಲಿಂಗ್ ಮಾಡಲು ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ದರಪಟ್ಟಿ ಸಂಖ್ಯೆ : 192(25/2013–ಎಫ್‌ಸಿ.ಎಸಿ, ದಿನಾಂಕ : 8–11–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಜ್ಯದ ಮೂರು ಸಂಗ್ರಹಣಾ ಏಜನ್ಸಿಗಳಿಗೆ ವಿವಿಧ ಜಿಲ್ಲೆಗಳನ್ನು ಹಂಚಿಕೆ ಮಾಡಿ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಸಾಮಾನ್ಯ ಭತ್ತ/ಕುಸುಬಲಕ್ಕಿ (ಪಾರ್‌ಬಾಯಿಲ್ಡ್)/ಜ್ಯೋತಿ ಭತ್ತವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 1,600/–ರ ದರದಲ್ಲಿ ಖರೀದಿಸುವಂತೆ ಆದೇಶಿಸಲಾಗಿದೆ.

ಅದರನ್ವಯ, ರಾಜ್ಯ ಸರ್ಕಾರದ ಮೂರು ಸಂಗ್ರಹಣಾ ಏಜನ್ಸಿಗಳಾದ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಮತ್ತು ಕರ್ನಾಟಕ ರಾಜ್ಯ ಮಾರುಕಟ್ಟೆ ಮಹಾಮಂಡಳವು ಅವುಗಳಿಗೆ ಹಂಚಿಕೆ ಮಾಡಿರುವ ಜಿಲ್ಲೆಗಳಲ್ಲಿ 2013–14ನೇ ಸಾಲಿನಲ್ಲಿ ಒಟ್ಟು 2,38,661.822 ಮೆ.ಟನ್ ಭತ್ತವನ್ನು ಖರೀದಿಸಿ, ಜಿಲ್ಲೆಗಳ ವಿವಿಧ ಉಗ್ರಾಣಗಳಲ್ಲಿ ಶೇಖರಣೆಯನ್ನು ಮಾಡಿರುತ್ತದೆ. ಈ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಭತ್ತ ಖರೀದಿಸಿರುವ ಜಿಲ್ಲೆಗಳಲ್ಲಿ, ಕಾರ್ಯ ನಿರತವಾಗಿರುವ ಅಕ್ಕಿ ಗಿರಣಿಗಳ ಮೂಲಕವೇ ಅದರ ಹಲ್ಲಿಂಗ್ ಸಾಮರ್ಥ್ಯದ ಆಧಾರದ ಮೇಲೆ ಹಲ್ಲಿಂಗ್ ಕಾರ್ಯಾದೇಶವನ್ನು ನೀಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 29 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 26–08–2014.**

2013–14ನೇ ಸಾಲಿನಲ್ಲಿ ರಾಜ್ಯದ ಸಂಗ್ರಹಣಾ ಏಜನ್ಸಿಗಳಿಗೆ ಹಂಚಿಕೆ ಮಾಡಿರುವ ವಿವಿಧ ಜಿಲ್ಲೆಗಳ ಮೂಲಕ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಿರುವ ಒಟ್ಟು 2,38,661.822 ಮೆ.ಟನ್ ಭತ್ತವನ್ನು ಆಯಾ ಜಿಲ್ಲೆಗಳಲ್ಲಿ ಸಂಗ್ರಹಣೆ ಮಾಡಿರುವ ಪ್ರಮಾಣವನ್ನು ಆಧರಿಸಿ, ಆಯಾ ಜಿಲ್ಲೆಗಳಲ್ಲೇ ಕಾರ್ಯ ನಿರತವಾಗಿರುವ ಅಕ್ಕಿ ಗಿರಣಿಗಳ ಮೂಲಕ ಹಲ್ಲಿಂಗ್ ಕಾರ್ಯವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ : ಎಫ್‌ಸಿಎಸ್ 15 ಆರ್‌ಪಿಆರ್ 2014, ದಿನಾಂಕ : 10–07–2014ರಲ್ಲಿ ಹೊರಡಿಸಿರುವ Karnataka Rice Milling Regulation and Rice and Paddy Procurement (Levy) amendment Order 2014ರ ಕಲಂ 12 (1), (2) ಮತ್ತು (3)ರನ್ನು ಪಾಲಿಸಿ ನಿರ್ವಹಿಸತಕ್ಕದ್ದು.

2) ಭತ್ತವನ್ನು ಭಾರತ ಸರ್ಕಾರವು ನಿಗಧಿಗೊಳಿಸಿದ ಮಾರ್ಗಸೂಚಿಯಂತೆ ಎಫ್‌ಎಕ್ಯೂ ಗುಣಮಟ್ಟದ ಅಕ್ಕಿಯನ್ನಾಗಿ ಪರಿವರ್ತಿಸಿ ನೀಡತಕ್ಕದ್ದು. ಭತ್ತ ಸಂಗ್ರಹಣಾ ಕೇಂದ್ರವಿರುವ ಜಿಲ್ಲೆಯಲ್ಲಿ ಒಂದು ಪಕ್ಷ ಅಕ್ಕಿ ಗಿರಣಿಗಳಿಲ್ಲದೆ ಇರುವ ಅಥವಾ ಇದ್ದೂ ಕಾರ್ಯನಿರ್ವಹಿಸದೇ ಇದ್ದಲ್ಲಿ, ಸಂಗ್ರಹಣಾ ಕೇಂದ್ರದ ಪಕ್ಕದ ಜಿಲ್ಲೆಯಲ್ಲಿರುವ ಹತ್ತಿರದ ಅಕ್ಕಿ ಗಿರಣಿಗಳಲ್ಲಿ ಹಲ್ಲಿಂಗ್ ಕಾರ್ಯವನ್ನು ನಿರ್ವಹಿಸತಕ್ಕದ್ದು.

3) ಗೋದಾಮುಗಳ ಕೊರತೆ ಇದ್ದು, ಬೇರೆ ಜಿಲ್ಲೆಯಲ್ಲಿ ಭತ್ತದ ದಾಸ್ತಾನನ್ನು ಇಟ್ಟಿರುವ ಸಂದರ್ಭದಲ್ಲಿ, ದಾಸ್ತಾನು ಮಾಡಿರುವ ಜಿಲ್ಲೆಯಲ್ಲಿರುವ ಅಕ್ಕಿ ಗಿರಣಿಗಳಿಂದಲೇ ಹಲ್ಲಿಂಗ್ ಕಾರ್ಯವನ್ನು ಮಾಡಿಸತಕ್ಕದ್ದು.

4) ಜಿಲ್ಲಾಧಿಕಾರಿಗಳು ನಮ್ಮ ಜಿಲ್ಲೆಗೆ ಸಂಬಂಧಿಸಿದಂತೆ ಅಕ್ಕಿ ಗಿರಣಿಯ ಹಲ್ಲಿಂಗ್ ಸಾಮರ್ಥ್ಯದ ಗುರಿಯನ್ನು ಉಪನಿರ್ದೇಶಕರ ಸಹಾಯದೊಂದಿಗೆ ನಿಗಧಿಗೊಳಿಸತಕ್ಕದ್ದು. ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ಇವರು ಅಕ್ಕಿ ಗಿರಣಿಗಳೊಂದಿಗೆ ಭತ್ತ ಹಲ್ಲಿಂಗ್‌ಗೆ ಸಂಬಂಧಿಸಿದಂತೆ ಕೆಳಗೆ ತಿಳಿಸಿದ ಷರತ್ತುಗಳಿಗೆ ಒಳಪಟ್ಟು ಕರಾರು ಒಪ್ಪಂದ ಮಾಡಿಕೊಳ್ಳತಕ್ಕದ್ದು.

(ಅ) ಅಕ್ಕಿ ಗಿರಣಿಗಳು ಭತ್ತವನ್ನು ಶೇಖರಣಾ ಕೇಂದ್ರದಿಂದ ಅಕ್ಕಿ ಗಿರಣಿಗಳಿಗೆ ಮತ್ತು ಹಲ್ಲಿಂಗ್ ನಂತರ ನಿಗಧಿತ ಪ್ರಮಾಣದ ಅಕ್ಕಿಯನ್ನು ಸಂಬಂಧಪಟ್ಟ ಗೋದಾಮುಗಳಿಗೆ ಸರಬರಾಜು ಮಾಡುವ ಬಗ್ಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಪೂರ್ವಭಾವಿಯಾಗಿ ಎತ್ತುವಳಿ ಕಾರ್ಯಸೂಚಿಯನ್ನು ನೀಡತಕ್ಕದ್ದು.

(ಆ) ಅಕ್ಕಿ ಗಿರಣಿದಾರರು ಜಿಲ್ಲಾಧಿಕಾರಿಗಳಿಗೆ ತಮ್ಮ ಒಪ್ಪಂದದ ಅವಧಿಗೆ ಭತ್ತ ಎತ್ತುವಳಿ ಮಾಡುವ ನಿಗಧಿತ ಕಾರ್ಯಪಟ್ಟಿಯನ್ನು ಪೂರ್ವಭಾವಿಯಾಗಿ ಸಲ್ಲಿಸಬೇಕು. ಅಗತ್ಯವೆನಿಸಿದಲ್ಲಿ ಜಿಲ್ಲಾಧಿಕಾರಿಗಳು ಸೂಕ್ತ ಬದಲಾವಣೆ ಮಾಡಬಹುದು. ಭತ್ತ ಎತ್ತುವಳಿಯ ನಿಗಧಿತ ಕಾರ್ಯಪಟ್ಟಿಗೆ ತಕ್ಕಂತೆ ಬಿಡುಗಡೆ ಆದೇಶ ನೀಡತಕ್ಕದ್ದು. ಭತ್ತವನ್ನು ಎತ್ತುವಳಿ ಮಾಡಲು 7 ದಿನಗಳ ಕಾಲಾವಕಾಶವನ್ನು ನಿಗಧಿಗೊಳಿಸತಕ್ಕದ್ದು. ಎತ್ತುವಳಿ ಮಾಡದಿದ್ದಲ್ಲಿ, ಪ್ರತಿ ಮೆ.ಟನ್ ಭತ್ತಕ್ಕೆ ರೂ. 12/–ರಂತೆ ಪ್ರತಿ ಮಾಹೆ ಗೋದಾಮು ಬಾಡಿಗೆಯನ್ನು ಅಕ್ಕಿ ಗಿರಣಿದಾರರು ಭರಿಸಬೇಕು 30 ದಿನಗಳಿಗೂ ಮೀರಿ ಎತ್ತುವಳಿತ ಮಾಡದಿದ್ದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಜೊತೆಗೆ ಇತರೆ ಸೂಕ್ತ ದಂಡವನ್ನು ವಿಧಿಸತಕ್ಕದ್ದು.

(ಇ) ಹಲ್ಲಿಂಗ್ ಒಪ್ಪಂದಕ್ಕೆ ಒಳಪಟ್ಟ ಗಿರಣಿದಾರರು ಹಲ್ಲಿಂಗ್ ಪೂರ್ವದಲ್ಲಿ ಭತ್ತ ಎತ್ತುವಳಿ ಮಾಡುವ ನಿಗಧಿತ ಕಾರ್ಯಪಟ್ಟಿ (lifting Plan) ನೀಡುವಂತೆ, ಹಲ್ಲಿಂಗ್ ನಂತರ ಪರಿವರ್ತಿತ ಅಕ್ಕಿಯನ್ನು ನೀಡುವಲ್ಲಿ ಸಪ್ಲೈ ಪ್ಲಾನ್ (Supply Plan) ನ್ನು ಸಹಾ ನೀಡತಕ್ಕದ್ದು. ಇದರ ಪ್ರಕಾರ ಪರಿವರ್ತಿತ ಅಕ್ಕಿಯನ್ನು ನೀಡುವುದು ತಡವಾದಲ್ಲಿ ಭಾರತ ಸರ್ಕಾರವು ನಿಗಧಿಗೊಳಿಸಿರುವ ಸಿಎಂಆರ್ ದರದಂತೆ ಈ ಸರಬರಾಜು ಆಗದೆ ಇರುವ ಅಕ್ಕಿಯ ಪ್ರಮಾಣಕ್ಕೆ ಶೇ. 12 ರಂತೆ ಬಡ್ಡಿಯನ್ನು 30 ದಿವಸಗಳಿಗೆ ದಂಡದ ರೂಪದಲ್ಲಿ ಗಿರಣಿದಾರರು ಪಾವತಿಸತಕ್ಕದ್ದು. 30 ದಿವಸಗಳ ವಿಳಂಬದ ನಂತರ ಸೂಕ್ತ ದಂಡ ವಿಧಿಸುವುದರೊಂದಿಗೆ ಕರಾರನ್ನು ರದ್ದುಗೊಳಿಸತಕ್ಕದ್ದು.

(ಈ) ಹಲ್ಲಿಂಗ್ ಕಾರ್ಯದ ಒಪ್ಪಂದಕ್ಕೆ ಒಳಪಡುವ ಗಿರಣಿದಾರರು ಎಷ್ಟು ಪ್ರಮಾಣದ ಭತ್ತ ಹಲ್ಲಿಂಗ್ ಮಾಡಲು ಒಪ್ಪಿರುತ್ತಾರೋ ಅಷ್ಟೇ ಪ್ರಮಾಣದ ಎಫ್‌ಎಕ್ಯೂ ಗುಣಮಟ್ಟದ ಅಕ್ಕಿಯನ್ನು ಹಲ್ಲಿಂಗ್ ಮಾಡುವ ಪೂರ್ವದಲ್ಲಿ ಮುಂಗಡ ಠೇವಣಿಯಾಗಿ ನೀಡಿ ತತ್ಸಮಾನವಾದ ಭತ್ತವನ್ನು ಪಡೆಯಬೇಕು ಅಥವಾ ಪರ್ಯಾಯವಾಗಿ ಗಿರಣಿದಾರರು ಪ್ರತಿ ಕ್ವಿಂಟಾಲ್ ಭತ್ತಕ್ಕೆ ದರ ರೂ. 1,800/–ರಂತೆ ರೂ. 600/–ನ್ನು ಬ್ಯಾಂಕ್ ಗ್ಯಾರೆಂಟಿ/ನಿಶ್ಚಿತ ಠೇವಣಿ/ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಮತ್ತು ಬಾಕಿ ರೂ. 1,200/–ನ್ನು ಪೋಸ್ಟ್ ಡೇಟೆಡ್ ಚೆಕ್ ಮೂಲಕ ನೀಡತಕ್ಕದ್ದು. ಬ್ಯಾಂಕ್ ಗ್ಯಾರೆಂಟಿಯು 3 ತಿಂಗಳ ಅವಧಿಯನ್ನು ಹೊಂದಿರತಕ್ಕದ್ದು ಹಾಗೂ ಅವಧಿ ಮೀರುವ 10 ದಿವಸಗಳ ಮುಂಚಿತವಾಗಿ ನವೀಕರಿಸಬೇಕು, ತಪ್ಪಿದಲ್ಲಿ ನಗಧೀಕರಿಸತಕ್ಕದ್ದು.

(ಉ) ಹಲ್ಲಿಂಗ್ ಕರಾರು/ಒಪ್ಪಂದ ಮಾಡಿಕೊಳ್ಳುವ ಪೂರ್ವದಲ್ಲಿ ಅಕ್ಕಿ ಗಿರಣಿದಾರರು ರೂ. 50,000/–ಗಳ ಭದ್ರತಾ ಠೇವಣಿಯನ್ನು/ನಿಶ್ಚಿತ ಠೇವಣಿ/ಡಿಮ್ಯಾಂಡ್ ಡ್ರಾಫ್ಟ್/ನಗದು ರೂಪದಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಇಡತಕ್ಕದ್ದು. ಈ ಮೊತ್ತಕ್ಕೆ ಯಾವುದೇ ಬಡ್ಡಿಯನ್ನು ಪಾವತಿಸಲಾಗುವುದಿಲ್ಲ.

(ಊ) ಅಕ್ಕಿ ಗಿರಣಿಗಳು ಅವುಗಳ ಸಾಮರ್ಥ್ಯದ ಆಧಾರದ ಮೇಲೆ ಸ್ವೀಕರಿಸಲ್ಪಡುವ ಸಾಮಾನ್ಯ ಭತ್ತವನ್ನು ಹಲ್ಲಿಂಗ್ ಮಾಡಿ ಶೇ. 67ರ ಪ್ರಮಾಣದಲ್ಲಿ ಅಕ್ಕಿಯನ್ನು ಮತ್ತು ಕುಸುಬಲಕ್ಕಿ (ಪಾರ್‌ಬಾಯಿಲ್ಡ್) ಭತ್ತವಾದಲ್ಲಿ ಶೇ. 68%ರ ಪ್ರಮಾಣದಲ್ಲಿ ಕುಸುಬಲಕ್ಕಿಯನ್ನು ನೀಡಿ ಅದನ್ನು ನೇರವಾಗಿ ನಿಗಧಿತ ಗೋದಾಮುಗಳಿಗೆ ಸರಬರಾಜು ಮಾಡತಕ್ಕದ್ದು. ಈ ಪ್ರಮಾಣದಲ್ಲಿ ಕೊರತೆಯುಂಟಾದಲ್ಲಿ ಅಕ್ಕಿ ಗಿರಣಿ ಮಾಲೀಕರನ್ನೇ ಜವಾಬ್ದಾರರನ್ನಾಗಿ ಮಾಡಿ ಕೊರತೆಯಾದ ಅಕ್ಕಿಯ ಪ್ರಮಾಣಕ್ಕೆ ಮಾರುಕಟ್ಟೆ ದರದಲ್ಲಿ ಮೊತ್ತವನ್ನು ಗಿರಣಿದಾರರಿಂದಲೇ ವಸೂಲು ಮಾಡತಕ್ಕದ್ದು.

(ಋ) ಅಕ್ಕಿ ಗಿರಣಿಯವರು ಯಾವ ವರ್ಗದ ಭತ್ತವನ್ನು (ಸಾಮಾನ್ಯ ಅಥವಾ ಗ್ರೇಡ್ ಎ ಭತ್ತವನ್ನು) ಹಲ್ಲಿಂಗ್ ಮಾಡಲು ಪಡೆದಿರುತ್ತಾರೆಯೋ ಪರಿವರ್ತಿತ ಅದೇ ವರ್ಗದ ಅಕ್ಕಿಯನ್ನು ನೀಡತಕ್ಕದ್ದು.

(ಎ) ಗಿರಣಿಯವರು ಗ್ರೇಡ್–ಎ ವರ್ಗದ ಸಿಎಂಆರ್ ಅಕ್ಕಿಯನ್ನು ನೀಡಿದಲ್ಲಿ, ಕೆಎಫ್‌ಸಿಎಸ್‌ಸಿಯವರಲ್ಲಿ ಗ್ರೇಡ್–ಎ ವರ್ಗದ ಭತ್ತ ಇಲ್ಲದೆ, ಕಾಮನ್ ವರ್ಗದ ಭತ್ತ ಮಾತ್ರ ಇದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಕೆಎಫ್‌ಸಿಎಸ್‌ಸಿರವರು ಭಾರತ ಸರ್ಕಾರ ನಿಗಧಿಪಡಿಸಿದ ಕಾಮನ್ ಮತ್ತು ಗ್ರೇಡ್–ಎ ಲೆವಿ ಅಕ್ಕಿ ದರದಂತೆ, ವ್ಯತ್ಯಾಸದ ದರವನ್ನು ಗಿರಣಿಯವರಿಗೆ ಪಾವತಿಸತಕ್ಕದ್ದು.

(ಏ) ಹಲ್ಲಿಂಗ್ ಕಾರ್ಯಕ್ಕೆ ನೀಡಲಾಗುವ ಭತ್ತದ ಯಾವುದೇ ಹಾನಿಗೆ ಅಕ್ಕಿಗಿರಣಿಗಳ ಮಾಲೀಕರನ್ನೇ ಪೂರ್ಣವಾಗಿ ಜವಾಬ್ದಾರರನ್ನಾಗಿ ಮಾಡತಕ್ಕದ್ದು. ಅಕ್ಕಿಗಿರಣಿಯವರು ಅಕ್ಕಿ ಪರಿವರ್ತನೆಗಾಗಿ ಪಡೆದ ಭತ್ತದ ಗುಣಮಟ್ಟ ಹಾಗೂ ಪರಿವರ್ತಿತ ಅಕ್ಕಿಯ ಗುಣಮಟ್ಟವನ್ನು ಸಾಗಾಣಿಕೆ ಹಾಗೂ ಸಂಗ್ರಹಣೆಯ ಸಮಯದಲ್ಲಿ ಕಾಪಾಡಿಕೊಳ್ಳತಕ್ಕದ್ದು. ಗಿರಣಿಯವರು ಪಡೆದ ದಾಸ್ತಾನಿಗೆ (ಭತ್ತ ಮತ್ತು ಪರಿವರ್ತಿತ ಅಕ್ಕಿಗೆ) ಸ್ವಂತ ಖರ್ಚಿನಿಂದ ವಿಮೆ ಮಾಡಿಸತಕ್ಕದ್ದು.

(ಐ) 270 ಕ್ವಿಂಟಾಲ್ ಭತ್ತಕ್ಕೆ ಒಂದು ಲಾಟ್ ಎಂದು ಪರಿಗಣಿಸಬೇಕು ಹಾಗೂ ಅದೇ ರೀತಿ ಲೆಕ್ಕದಲ್ಲಿ ಹಲ್ಲಿಂಗ್ ಮಾಡಲು ಭತ್ತವನ್ನು ಗಿರಣಿಗಳಿಗೆ ಪೂರ್ಣ ಲಾಟ್‌ಗಳಲ್ಲಿ ನೀಡತಕ್ಕದ್ದು. ಯಾವುದೇ ಕಾರಣಕ್ಕೂ ಲಾಟ್‌ಗಳನ್ನು ವಿಭಜಿಸಿ ಭತ್ತವನ್ನು ಹಲ್ಲಿಂಗ್ ಕಾರ್ಯಕ್ಕೆ ನೀಡತಕ್ಕದಲ್ಲ. ಅಕ್ಕಿ ಗಿರಣಿದಾರರು ತಮಗೆ ನಿಗಧಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಭತ್ತ ಸರಬರಾಜಾದಲ್ಲಿ ಕೆಎಫ್‌ಸಿಎಸ್‌ಸಿಯವರ ವಿರುದ್ಧ ಯಾವುದೇ ತಕರಾರು ಹೂಡುವಂತಿಲ್ಲ.

(ಒ) ಕಸ್ಟಂ ಮಿಲ್ಲಿಂಗ್ ಪದ್ಧತಿಗೆ ಕೇಂದ್ರ ಸರ್ಕಾರವು ಕಾಲ ಕಾಲಕ್ಕೆ ನಿಗಧಿಪಡಿಸುವ ದರಪಟ್ಟಿಯನ್ವಯ ಹಲ್ಲಿಂಗ್ ವೆಚ್ಚವನ್ನು ಪ್ರತಿ ಕ್ವಿಂಟಾಲ್‌ಗೆ ಪಾವತಿಸತಕ್ಕದ್ದು. 8 ಕಿ.ಮಿ.ಗೆ ಮೇಲ್ಪಟ್ಟು ಕ್ರಮಿಸುವ ದೂರಕ್ಕೆ ಸಂಗ್ರಹಣಾ ಕೇಂದ್ರದಿಂದ ಗಿರಣಿಗೆ ಭತ್ತದ ಸಾಗಾಣಿಕೆ ಹಾಗೂ ಪರಿವರ್ತಿಸಿದ ಅಕ್ಕಿಯನ್ನು ಗಿರಣಿಗಳಿಂದ ಸಗಟು ಕೇಂದ್ರಕ್ಕೆ ಸಾಗಾಣಿಕೆ ಮಾಡಲು, ಈಗಾಗಲೇ ಜಿಲ್ಲೆಯಲ್ಲಿ ಭತ್ತದ ಸಾಗಾಣಿಕೆ ಅಥವಾ ಸಾರ್ವಜನಿಕ ವಿತರಣಾ ಅಕ್ಕಿ ಸಾಗಾಣಿಕೆಗೆ ನಿಗಧಿಪಡಿಸಿದ ದರದಂತೆ ಪಾವತಿಸತಕ್ಕದ್ದು.

(ಓ) ಹಲ್ಲಿಂಗ್ ಮಾಡಿದಾಗ ಬರುವ ಉಪ ಉತ್ಪನ್ನಗಳಾದ ತೌಡು, ಹೊಟ್ಟು ಮತ್ತು ಸಣ್ಣ ನುಚ್ಚನ್ನು ಅಕ್ಕಿ ಗಿರಣಿ ಮಾಲೀಕರೇ ಉಳಿಸಿಕೊಳ್ಳತಕ್ಕದ್ದು.

(ಔ) ಗಿರಣಿದಾರರು ಭತ್ತವನ್ನು ಪಡೆದ ಗೋಣಿ ಚೀಲದಲ್ಲಿಯೇ ಹಲ್ಲಿಂಗ್ ನಂತರ ಪರಿವರ್ತಿತ ಅಕ್ಕಿಯನ್ನು ತುಂಬಿಸಿ ಕೊಡತಕ್ಕದ್ದು. ಅಕ್ಕಿ ತುಂಬಿಸಿ ಉಳಿಕೆ ಚೀಲಗಳನ್ನು ಗಿರಣಿದಾರರು ತಾವೇ ಇಟ್ಟುಕೊಳ್ಳತಕ್ಕದ್ದು. ಉಳಿದ ಪ್ರತಿ ಚೀಲಕ್ಕೆ ರೂ. 12/–ರಂತೆ ದರವನ್ನು ಲೆಕ್ಕಾಚಾರ ಮಾಡಿ ಗಿರಣಿದಾರರಿಗೆ ಪಾವತಿಸುವ ಹಲ್ಲಿಂಗ್ ದರದಲ್ಲಿ ಕಡಿತಗೊಳಿಸಿ ಪಾವತಿಸತಕ್ಕದ್ದು, ಹಾಗೂ ಚೀಲದ ಮೇಲೆ ಕೆಎಫ್‌ಸಿಎಸ್‌ಸಿರವರ ಬೇಡಿಕೆಯಂತೆ ವಿವರಗಳನ್ನು ಸ್ಟೆನ್ಸಿಲ್ ಮಾಡಿಸಿರಬೇಕು.

| | |
|---|---|
| ಅ) ಏಜೆನ್ಸಿಯ ಹೆಸರು | . . . . . . . . . . . . . ಜಿಲ್ಲೆ |
| ಆ) ಅಕ್ಕಿ ಗಿರಣಿ ಹೆಸರು | . . . . . . . . . . . . . . . |
| ಇ) ದಾಸ್ತಾನಿನ ವಿವರ | ವರ್ಷ . . . . . . . . . . . . |
| ಈ) ದಾಸ್ತಾನಿನ ನಿವ್ವಳ ತೂಕ | . . . . . . . . . . . . ಕೆ.ಜಿ. |
| ಉ) ಅಕ್ಕಿಯ ವರ್ಗ | ಸಾಮಾನ್ಯ/ಗ್ರೇಡ್–ಎ |

ಹಾಗೂ ಭತ್ತದ ಪ್ರತಿ ಕ್ವಿಂಟಾಲ್ ಸಾಮರ್ಥ್ಯದ ಹಳೇ ಗೋಣಿ ಚೀಲದ ಬಾಬ್ತು ರೂ. 12/–ನ್ನು ಮೇಲಿನ ಮೊತ್ತದಲ್ಲಿ ಕಳೆಯತಕ್ಕದ್ದು.

ಅಂ) ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು ಭತ್ತವನ್ನು ಅಕ್ಕಿ ಗಿರಣಿಗಳಿಗೆ ನೀಡುವ ಮುಂಚೆ ಮತ್ತು ಅದರ ಪರಿವರ್ತನೆ ನಂತರ ಪಡೆಯುವ ಅಕ್ಕಿಯ ಗುಣಮಟ್ಟವನ್ನು Third Party assayer ನ್ನು ನೇಮಕ ಮಾಡಿ (FAQ) ಅಕ್ಕಿಯನ್ನು ಮಾತ್ರ ಗಿರಣಿಗಳಿಂದ ಪಡೆಯತಕ್ಕದ್ದು ಹಾಗೂ ಕಳಪೆ ದರ್ಜೆಯ ಗುಣಮಟ್ಟದ ಅಕ್ಕಿಯನ್ನು ತಿರಸ್ಕರಿಸತಕ್ಕದ್ದು.

ಅಃ) ಹಲ್ಲಿಂಗ್‌ಗೆ ಪಡೆಯುವ ಭತ್ತವನ್ನು ಅಕ್ಕಿ ಗಿರಣಿಗಳು 3 ತಿಂಗಳೊಳಗೆ ಹಲ್ಲಿಂಗ್ ಮಾಡಿ ಆಹಾರ ಇಲಾಖೆಯಿಂದ ನೀಡುವ ಬಿಡುಗಡೆ ಆದೇಶದಂತೆ ಬಿಡುಗಡೆ ಮಾಡತಕ್ಕದ್ದು.

5) ಜಿಲ್ಲಾಧಿಕಾರಿಗಳ ವರದಿ ಆಧಾರದ ಮೇಲೆ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆರವರು ಹಲ್ಲಿಂಗ್ ಅವಧಿಯನ್ನು ವಿಶೇಷ ಸಂದರ್ಭದಲ್ಲಿ ವಿಸ್ತರಿಸುವ ಅಧಿಕಾರ ಹೊಂದಿರುತ್ತಾರೆ.

6) ಒಪ್ಪಂದ ಮಾಡಿಕೊಂಡಂತೆ ಭತ್ತವನ್ನು ಹಲ್ಲಿಂಗ್ ಮಾಡಲು ಅಕ್ಕಿ ಗಿರಣಿದಾರರು ವಿಫಲವಾದಲ್ಲಿ, ಕೆಎಫ್‌ಸಿಎಸ್‌ಸಿ ಇವರು ಒಪ್ಪಂದ ಮಾಡಿಕೊಂಡ ಗಿರಣಿದಾರರು ವೆಚ್ಚ ಹಾಗೂ ಜವಾಬ್ದಾರಿಯಲ್ಲಿ ಈ ಭತ್ತವನ್ನು ಬೇರೆ ಗಿರಣಿಯವರಿಂದ ಹಲ್ಲಿಂಗ್ ಮಾಡಿಸತಕ್ಕದ್ದು.

7) ಒಪ್ಪಂದ ಮಾಡಿಕೊಂಡ ಗಿರಣಿದಾರರು ಒಪ್ಪಂದದ ಕರಾರಿನಂತೆ ನಡೆದುಕೊಳ್ಳಲು ವಿಫಲರಾಗಿದ್ದಾರೆಂದು ಕಂಡುಬಂದಲ್ಲಿ ಕೆಎಫ್‌ಸಿಎಸ್‌ಸಿರವರು ಇವರ ಒಪ್ಪಂದವನ್ನು ರದ್ದುಗೊಳಿಸತಕ್ಕದ್ದು. ಆದಾಗ್ಯೂ ಅಕ್ಕಿ ಗಿರಣಿದಾರರು ಭತ್ತವನ್ನು ಹಲ್ಲಿಂಗ್ ಮಾಡಲು (ಅಥವಾ ಪರಿವರ್ತಿಸಿದ ಅಕ್ಕಿ) ಎತ್ತುವಳಿ ಮಾಡದಿದ್ದರೆ ಒಪ್ಪಂದದ ನಿಯಮಗಳು ಅವರಿಗೆ ಅನ್ವಯಿಸುತ್ತದೆ.

8) ಅಕ್ಕಿ ಗಿರಣಿಯ ಹತ್ತಿರದ ದಾಸ್ತಾನು ಕೇಂದ್ರಗಳಲ್ಲಿ ಭತ್ತ ದಾಸ್ತಾನು ಲಭ್ಯವಿದ್ದಲ್ಲಿ ದೂರದ ದಾಸ್ತಾನು ಕೇಂದ್ರಗಳಿಂದ ಭತ್ತ ನೀಡುವುದು.

9) ಅಕ್ಕಿ ಗಿರಣಿದಾರರು ತಮಗೆ ನಿಗಧಿಗೊಳಿಸಿದ ಹಲ್ಲಿಂಗ್ ಸಾಮರ್ಥ್ಯಕ್ಕಿಂತ ಇನ್ನೂ ಹೆಚ್ಚಿಗೆ ಹಲ್ಲಿಂಗ್ ಮಾಡಲು ಸ್ವಇಚ್ಛೆಯಿಂದ ಮುಂದೆ ಬಂದಲ್ಲಿ, ಸಾಗಾಣಿಕೆ ಅಂತರದ ದರವನ್ನು ಕಡಿಮೆಗೊಳಿಸುವ ನಿಟ್ಟಿನಲ್ಲಿ ಅಂತಹ ಗಿರಣಿದಾರರಿಗೆ ಹೆಚ್ಚುವರಿ ಹಲ್ಲಿಂಗ್ ಮಾಡಲು ಅವಕಾಶ ನೀಡಬಹುದು. ಈ ಸಂಬಂಧ ಜಿಲ್ಲಾಧಿಕಾರಿಗಳ ವರದಿಯ ಮೇಲೆ ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರ ನಿರ್ಣಯ ಅಂತಿಮವಾಗಿರುತ್ತದೆ.

10) ಅಕ್ಕಿ ಗಿರಣಿಯವರು ಭತ್ತ ಪರಿವರ್ತನಾ ಪ್ರಕ್ರಿಯೆಗೆ ಸಂಬಂಧಪಟ್ಟ ಎಲ್ಲಾ ಲೆಕ್ಕ ಪತ್ರ ಮತ್ತು ಸಂಪೂರ್ಣ ದಾಖಲಾತಿಗಳನ್ನು ನಿರ್ವಹಿಸಿ ಕಾಲಕಾಲಕ್ಕೆ ಅಧಿಕಾರಿಗಳಿಗೆ ತಪಾಸಣೆಗೆ ಒದಗಿಸತಕ್ಕದ್ದು.

11) ಪರಿವರ್ತಿಸಿದ ಅಕ್ಕಿಯನ್ನು ರಾಜ್ಯ ಸರ್ಕಾರವೇ ಸ್ಟೇಟ್ ಪೂಲ್‌ಗೆ ಉಪಯೋಗಿಸಿಕೊಂಡರೆ, ಈ ಸಂಬಂಧ ತಗುಲುವ ವೆಚ್ಚವನ್ನು 2014–15ನೇ ಸಾಲಿನ ಸಹಾಯಧನ ಲೆಕ್ಕ ಶೀರ್ಷಿಕೆ 2408–01–102–0–102–0–01–106 (ಯೋಜನೇತರ) ಇದರಲ್ಲಿ ಭರಿಸತಕ್ಕದ್ದು.

12) ಭತ್ತವನ್ನು ಅಕ್ಕಿಯನ್ನಾಗಿ ಪರಿವರ್ತಿಸಿ, ಅದನ್ನು ನಂತರ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ನೀಡುವ ಹಂಚಿಕೆ ಆದೇಶದನ್ವಯ ಪಡಿತರ ಚೀಟಿದಾರರಿಗೆ ವಿತರಿಸಲು ಕ್ರಮವಹಿಸತಕ್ಕದ್ದು.

13) ಈ ವ್ಯವಹರಿಣಿಕೆಯಲ್ಲಿ ತಕರಾರು/ವಿವಾದ ಉದ್ಭವಿಸಿದಲ್ಲಿ ಕಾರ್ಯದರ್ಶಿಗಳು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರು ಅಂತಿಮ ನಿರ್ಣಾಯಕ ಅಧಿಕಾರಿಗಳಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ .

**P.R. 671**

**SC-200**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಇದರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಜಂಟಿ ನಿರ್ದೇಶಕರ ವೃಂದದಿಂದ ಎನ್‌ಕೇಡರ್ ಹುದ್ದೆಯಾಗಿ ಅಳವಡಿಸುವ ಬಗ್ಗೆ.

**ಓದಲಾಗಿದೆ :**
1. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂ. ಓಟಿಎಸ್ 82/89–90, ದಿನಾಂಕ : 04–08–1990.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಎಹೆಚ್‌ಎಫ್‌ಎಫ್ 352 ಎಸ್‌ಎಫ್‌ಎಂ 91, ದಿನಾಂಕ : 18–12–1991.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಇವರ ಪತ್ರ ಸಂ. ಕರಾಸಮೀಮ/ಸಿಬ್ಬಂದಿ/03/2012–13, ದಿನಾಂಕ : 12–07–2012.
4. ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 154 ಮೀಇಸೇ 2013, ದಿನಾಂಕ : 15–07–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದೇಶದಲ್ಲಿ ಕರ್ನಾಟಕ ಸಹಕಾರ ಒಳನಾಡು ಮೀನುಗಾರಿಕೆ ಮಹಾಮಂಡಲ ನಿಯಮಿತ, ಬೆಂಗಳೂರು ಈ ಸಂಸ್ಥೆಯ ಜನರಲ್ ಮ್ಯಾನೇಜರ್ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಮೀನುಗಾರಿಕೆ ಜಂಟಿ ನಿರ್ದೇಶಕರ ಹುದ್ದೆಯಿಂದ ಎರವಲು ಸೇವೆಯ ಮೇಲೆ ನೇಮಕಾತಿ ಮಾಡಲು ಆದೇಶಿಸಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಅಧಿಸೂಚನೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಈ ಹುದ್ದೆಗೆ ಮೀನುಗಾರಿಕೆ ಜಂಟಿ ನಿರ್ದೇಶಕರನ್ನು ನೇಮಿಸಲಾಗಿರುತ್ತದೆ. ಮುಂದುವರೆದು, ಈ ಹಿಂದೆ ಈ ಹುದ್ದೆಗೆ ಬಹುತೇಕ ಅವಧಿಗೆ ಮೀನುಗಾರಿಕೆ ಇಲಾಖೆಯ ಅಧಿಕಾರಿಗಳನ್ನೇ ನೇಮಿಸಲಾಗಿರುತ್ತದೆ. ಪ್ರಸ್ತುತ, ಮೇಲೆ ಓದಲಾದ (4)ರ ಆದೇಶದನ್ವಯ ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಇದರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯಲ್ಲಿ ಒಬ್ಬರು ಮೀನುಗಾರಿಕೆ ಜಂಟಿ ನಿರ್ದೇಶಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ರಾಜ್ಯದ ಜಲ ಪ್ರದೇಶಗಳನ್ನು ಸಮರ್ಪಕವಾಗಿ ಬಳಸಿಕೊಂಡು ಹೆಚ್ಚು ಮೀನು ಉತ್ಪಾದಿಸುವುದು ಹಾಗೂ ಪೌಷ್ಟಿಕ ಆಹಾರವನ್ನು ಉತ್ತಮ ಗುಣಮಟ್ಟದ ಮೀನು ಎಲ್ಲೆಡೆ ಪೂರೈಕೆಯಾಗುವಂತೆ ಸಂಗ್ರಹಣೆ, ಮಾರುಕಟ್ಟೆ, ಸಂಸ್ಕರಣೆ, ಮಾರಾಟ ಕಾರ್ಯ, ಮೀನುಗಾರರನ್ನು ಸಂಘಟಿಸಿ ಹೆಚ್ಚು ಮೀನು ಉತ್ಪಾದಿಸುವುದು ಹಾಗೂ ಮೀನುಗಾರಿಕೆ ಕ್ಷೇತ್ರದಲ್ಲಿ ಹೊಸ ಹೊಸ ಅವಿಷ್ಕಾರಗಳನ್ನು ಕೈಗೊಳ್ಳುವುದು. ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಈ ಸಂಸ್ಥೆಯ ಉದ್ದೇಶವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಸಂಸ್ಥೆಯ ಮುಖ್ಯಸ್ಥರ ಹುದ್ದೆಯಾದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಮೀನುಗಾರಿಕೆ ವಿಷಯದಲ್ಲಿ ಅನುಭವವುಳ್ಳ ಮೀನುಗಾರಿಕೆ ಇಲಾಖೆಯ ಅಧಿಕಾರಿಯಿಂದಲೇ ಭರ್ತಿ ಮಾಡುವುದು ಅತ್ಯವಶ್ಯಕವಾಗಿರುತ್ತದೆ ಎಂದು ಪರಿಗಣಿಸಲಾಗಿದೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಈ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಜಂಟಿ ನಿರ್ದೇಶಕರ ವೃಂದದ ಹುದ್ದೆಯಿಂದಲೇ ಭರ್ತಿ ಮಾಡಬೇಕೆಂದು ನಿರ್ಧರಿಸಿ, ಈ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಕೇಡರ್ ಹುದ್ದೆಯಾಗಿ ಸೇರಿಸಿಕೊಳ್ಳಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ/07/ಮೀಇಸೇ/2012, ಬೆಂಗಳೂರು, ದಿನಾಂಕ : 14–8–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿಯಮಿತ, ಮೈಸೂರು ಇದರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಜಂಟಿ ನಿರ್ದೇಶಕರ ವೃಂದದ (ರೂ. 40,050–ರೂ.56,500) ಹುದ್ದೆಯಿಂದಲೇ ಭರ್ತಿ ಮಾಡಿಕೊಳ್ಳಲು ಅನುವಾಗುವಂತೆ ಈ ಹುದ್ದೆಯನ್ನು ಮೀನುಗಾರಿಕೆ ಇಲಾಖೆಯ ಎನ್‌ಕೇಡರ್ ಹುದ್ದೆಯನ್ನಾಗಿ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೂಕ್ತವಾಗಿ ತಿದ್ದುಪಡಿಯ ಮೂಲಕ ಅಳವಡಿಸುವ ಷರತ್ತಿಗೊಳಪಟ್ಟು ಅಳವಡಿಸಿಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

PR. 672

**ಕೆ.ಆರ್. ರವಿಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಪಶು ಸಂಗೋಪನ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ನೂತನ ಜವಳಿ ನೀತಿ 2013–18ರಡಿ ಜವಳಿ ಕೈಗಾರಿಕೆಗಳ ಪ್ರಾಜೆಕ್ಟ್‌ಗಳಿಗೆ ಪ್ರೋತ್ಸಾಹನ ಮತ್ತು ಉತ್ತೇಜನಗಳ ಅಪ್ರೈಸಲ್/ಅನುಮೋದನೆ ನೀಡುವ ಸಮಿತಿ ರಚಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ವಾಕೈ 44 ಜಕೈಯೋ 2012, ದಿನಾಂಕ : 31–10–2013.
2. ದಿನಾಂಕ : 26–12–2013 ಮತ್ತು 06–06–2014ರಂದು ನಡೆದ ಎಸ್.ಎಲ್.ಐ.ಪಿ.ಸಿ. ಸಮಿತಿ ಸಭೆಯ ನಡವಳಿಗಳು
3. ಜವಳಿ ಅಭಿವೃದ್ಧಿ ಆಯುಕ್ತರವರ ಪತ್ರ ಸಂಖ್ಯೆ : ಕೈಜಇ/ನೂಜನೀ/ಡಿಡಿ (ಐ)ಕೈಪಿಡಿ/2014–15, ದಿನಾಂಕ : 14–08–2014.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ನೂತನ ಜವಳಿ ನೀತಿ 2013–18 ಅನ್ನು ಘೋಷಿಸಿ, ಜಾರಿಗೊಳಿಸಲಾಗಿರುತ್ತದೆ. ಓದಲಾದ (3)ರ ಜವಳಿ ಅಭಿವೃದ್ಧಿ ಆಯುಕ್ತರ ಪತ್ರದಲ್ಲಿ ದಿನಾಂಕ : 26–12–2013 ಮತ್ತು 06–06–2014ರಂದು ಜರುಗಿದ ರಾಜ್ಯಮಟ್ಟದ ಯೋಜನಾ ಅನುಷ್ಠಾನ ಸಮಿತಿ (ರಿವ್ಯೂ & ಮಾನಿಟರಿಂಗ್ ಕಮಿಟಿ) ಸಭೆಯ ನಡವಳಿಗಳಲ್ಲಿ ಪ್ರೋತ್ಸಾಹನ ಮತ್ತು ಉತ್ತೇಜನಗಳ ಆಡಳಿತ ನಿರ್ವಹಣಾ ಕಾರ್ಯಾಚರಣೆ ಕೈಪಿಡಿ ಮಾರ್ಗಸೂಚಿಗಳನ್ನು ಅನುಮೋದಿಸಿ ಅನುಷ್ಠಾನಕ್ಕೆ ತರಲು ವಿವರವಾದ ಮಾರ್ಗಸೂಚಿಗಳನ್ನು ಸಮಿತಿಯು ಈ ಕೆಳಗಿನಂತೆ ಅನುಮೋದಿಸಿರುತ್ತದೆ.

A Head Office Approval Committee (DH&T HOAC) will be set up under the Chairmanship of the Commissioner for Textile Development and Director of Handlooms and Textiles. Project Director-Nuthana Javali Neethi-2013-18 shall be the Convener of the Committee. The Committee shall comprise of representatives of the related Departments of the Government of Karnataka such as BESCOM, KSPCB, DIC, KUM etc., Banks. R&D institutions and Industry Associations. This Committee shall examine various investment proposals, which have been recommended for sanction by the DH&T personnel at the district level. This Committee shall take firm proposals at the district level recommended by the HOPAC for sanction and release of incentives and other directions for MSME projects In case of Projects. HOAC shall appraise the Project and Preset the recommendations to SLPIC for approval.

ಮೇಲ್ಕಂಡ ಹಿನ್ನೆಲೆಯಲ್ಲಿ ನೂತನ ಜವಳಿ ನೀತಿ 2013–18ರಡಿ ಜವಳಿ ಕೈಗಾರಿಕೆಗಳ ಪ್ರಾಜೆಕ್ಟ್‌ಗಳಿಗೆ ಪ್ರಸ್ತಾವನೆಗಳಿಗೆ ಪ್ರೋತ್ಸಾಹನ ಮತ್ತು ಉತ್ತೇಜನಗಳನ್ನು ಅನುಮೋದನೆ ನೀಡುವ ಮತ್ತು ಮಂಜೂರು ಮಾಡುವ ಕುರಿತು ಸಮಿತಿಯನ್ನು (Head Office Approval Committee (HOAC) ಈ ಕೆಳಕಂಡಂತೆ ರಚಿಸಲು ಜವಳಿ ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಇಲಾಖೆಯ ಹೆಸರು ಮತ್ತು ಹುದ್ದೆ | ಸಮಿತಿ |
|---|---|---|
| 1. | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಕೇಂದ್ರ ಕಛೇರಿ, ಬೆಂಗಳೂರು | ಅಧ್ಯಕ್ಷರು |
| 2. | ಯೋಜನಾ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಕೇಂದ್ರ ಕಛೇರಿ, ಬೆಂಗಳೂರು | ಕನ್ವೀನಿಯರ್ |
| 3. | ಜಂಟಿ ನಿರ್ದೇಶಕರು (ಕೈಗಾರಿಕಾಭಿವೃದ್ಧಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಖನಿಜ ಭವನ, ಬೆಂಗಳೂರು | ಸದಸ್ಯರು |
| 4. | ಜಂಟಿ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು | ಸದಸ್ಯರು |
| 5. | ನಿರ್ದೇಶಕರು, ಅಪೆರೆಲ್ ಎಕ್ಸ್‌ಪೋರ್ಟ್ಸ್ ಪ್ರೊಮೋಷನ್ ಕೌನ್ಸಿಲ್, ಜವಳಿ ಮಂತ್ರಾಲಯ, ಸ್ವಾಯತ್ತತೆ ಸಂಸ್ಥೆ, ಯಶವಂತಪುರ ಕೈಗಾರಿಕಾ ಪ್ರದೇಶ, ಬೆಂಗಳೂರು | ಸದಸ್ಯರು |
| 6. | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಯುಟಿಲಿಟಿ ಬಿಲ್ಡಿಂಗ್, ಎಂ.ಜಿ. ರಸ್ತೆ, ಬೆಂಗಳೂರು ಇವರ ಪ್ರತಿನಿಧಿ | ಸದಸ್ಯರು |
| 7. | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಕೆ.ಆರ್ ಸರ್ಕಲ್, ಬೆಂಗಳೂರು ಇವರ ಪ್ರತಿನಿಧಿ | ಸದಸ್ಯರು |
| 8. | ಮುಖ್ಯ ವ್ಯವಸ್ಥಾಪಕರು, ರಾಜ್ಯ ಅಗ್ರಗಣ್ಯೇಯ ಬ್ಯಾಂಕ್ (ಸಿಂಡಿಕೇಟ್ ಬ್ಯಾಂಕ್), ಗಾಂಧಿ ನಗರ, ಬೆಂಗಳೂರು | ಸದಸ್ಯರು |
| 9. | ಸ್ಕೀಮ್ ಮ್ಯಾನೇಜ್‌ಮೆಂಟ್ ಏಜೆನ್ಸಿ (ನೂತನ ಜವಳಿ ನೀತಿ 2013–18) ಇದರ ಪ್ರತಿನಿಧಿ | ಸದಸ್ಯರು |

**ಸದರಿ ಸಮಿತಿಯ ಪ್ರಮುಖ ಉದ್ದೇಶಗಳು ಈ ರೀತಿ ಇರುತ್ತದೆ :**

1. ಸಮಿತಿಯು ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆ ಸೇರಿ ನೂತನ ಜವಳಿ ನೀತಿ 2013–18ರಡಿ ಎಂ.ಎಸ್.ಎಂ.ಇ. ಪ್ರಾಜೆಕ್ಟ್‌ನ ಪ್ರೋತ್ಸಾಹನ ಮತ್ತು ಉತ್ತೇಜನಗಳ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿ ಮಂಜೂರಾತಿ ನೀಡುವುದು.
2. ಸಮಿತಿ ಅನುಮೋದನೆ ನೀಡಿದ ಪ್ರಸ್ತಾವನೆಗಳಿಗೆ ನಿಯಮಾನುಸಾರ ಪ್ರೋತ್ಸಾಹನ ಮತ್ತು ಉತ್ತೇಜನಗಳ ಮೊತ್ತವನ್ನು ಆಯವ್ಯಯದ ಲಭ್ಯತೆಗೆ ಅನುಗುಣವಾಗಿ ಜವಳಿ ಅಭಿವೃದ್ಧಿ ಆಯುಕ್ತರು ಬಿಡುಗಡೆ ಮಾಡುವುದು.
3. ಮೆಗಾ ಪ್ರಾಜೆಕ್ಟ್‌ಗಳು ಗ್ರೀನ್ ಫೀಲ್ಡ್ ಟೆಕ್ಸ್‌ಟೈಲ್ ಪಾರ್ಕ್, ಬ್ರೌನ್ ಫೀಲ್ಡ್ ಟೆಕ್ಸ್‌ಟೈಲ್ ಪಾರ್ಕ್ ಮತ್ತು ನಿರ್ದಿಷ್ಟ ಹಿಂದುಳಿದ ಪ್ರದೇಶದಲ್ಲಿ ಜವಳಿ ಉದ್ದಿಮೆಗಳ ಸ್ಥಾಪನೆಯ ಪ್ರಾಜೆಕ್ಟ್ ಮುಂತಾದ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಪ್ರೋತ್ಸಾಹನ ಮತ್ತು ಉತ್ತೇಜನಗಳ ಅನುಮೋದನೆಗೆ ರಾಜ್ಯಮಟ್ಟದ ಯೋಜನಾ ಅನುಷ್ಠಾನ ಸಮಿತಿ ಸಭೆಗೆ ಶಿಫಾರಸ್ಸು ಮಾಡುವುದು.

ಆದುದರಿಂದ, ಜವಳಿ ನೀತಿಯಡಿ ಎಂ.ಎಸ್.ಎಂ.ಇ. ಘಟಕಗಳಿಗೆ ಪ್ರೋತ್ಸಾಹನ ಮತ್ತು ಉತ್ತೇಜನಗಳ ಪ್ರಸ್ತಾವನೆಗಳನ್ನು ಅನುಮೋದಿಸಿ ಮಂಜೂರಾತಿ ನೀಡಲು ಸರ್ಕಾರದ ವಿವಿಧ ಇಲಾಖೆ ಮತ್ತು ನಿಗಮ ಮಂಡಳಿಗಳ ಪ್ರತಿನಿಧಿ ಸದಸ್ಯರನ್ನು ಒಳಗೊಂಡಿರುವ ಕಾರಣ ಮೇಲಿನಂತೆ ಪ್ರಸ್ತಾಪಿಸಿರುವ ಸಮಿತಿಗಳಿಗೆ ಸದಸ್ಯರನ್ನು ನೇಮಿಸಿ ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಜವಳಿ ಅಭಿವೃದ್ಧಿ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 182 ಜಕೈಯೋ 2014, ಬೆಂಗಳೂರು, ದಿನಾಂಕ : 19–08–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನೂತನ ಜವಳಿ ನೀತಿ 2013–18ರಡಿ ಜವಳಿ ಕೈಗಾರಿಕೆಗಳ ಪ್ರಾಜೆಕ್ಟ್‌ನ ಪ್ರಸ್ತಾವನೆಗಳಿಗೆ ಪ್ರೋತ್ಸಾಹನ ಮತ್ತು ಉತ್ತೇಜನಗಳನ್ನು ಅನುಮೋದನೆ ನೀಡುವ ಮತ್ತು ಮಂಜೂರು ಮಾಡುವ ಸಮಿತಿ (Head Office Approval Committee (HOAC)) ಈ ಕೆಳಕಂಡಂತೆ ರಚಿಸಲಾಗಿದೆ.

| ಕ್ರಮ ಸಂಖ್ಯೆ | ಇಲಾಖೆಯ ಹೆಸರು ಮತ್ತು ಹುದ್ದೆ | ಸಮಿತಿ |
|---|---|---|
| 1. | ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಕೇಂದ್ರ ಕಛೇರಿ, ಬೆಂಗಳೂರು | ಅಧ್ಯಕ್ಷರು |
| 2. | ಯೋಜನಾ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಕೇಂದ್ರ ಕಛೇರಿ, ಬೆಂಗಳೂರು | ಕನ್ವೀನಿಯರ್ |
| 3. | ಜಂಟಿ ನಿರ್ದೇಶಕರು (ಕೈಗಾರಿಕಾಭಿವೃದ್ಧಿ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಖನಿಜ ಭವನ, ಬೆಂಗಳೂರು | ಸದಸ್ಯರು |
| 4. | ಜಂಟಿ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು | ಸದಸ್ಯರು |
| 5. | ನಿರ್ದೇಶಕರು, ಅಪೆರೆಲ್ ಎಕ್ಸ್‌ಪೋರ್ಟ್ಸ್ ಪ್ರೊಮೋಷನ್ ಕೌನ್ಸಿಲ್, ಜವಳಿ ಮಂತ್ರಾಲಯ, ಸ್ವಾಯತ್ತತೆ ಸಂಸ್ಥೆ, ಯಶವಂತಪುರ ಕೈಗಾರಿಕಾ ಪ್ರದೇಶ, ಬೆಂಗಳೂರು | ಸದಸ್ಯರು |
| 6. | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಯುಟಿಲಿಟಿ ಬಿಲ್ಡಿಂಗ್, ಎಂ.ಜಿ. ರಸ್ತೆ, ಬೆಂಗಳೂರು ಇವರ ಪ್ರತಿನಿಧಿ | ಸದಸ್ಯರು |
| 7. | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಕೆ.ಆರ್ ಸರ್ಕಲ್, ಬೆಂಗಳೂರು ಇವರ ಪ್ರತಿನಿಧಿ | ಸದಸ್ಯರು |
| 8. | ಮುಖ್ಯ ವ್ಯವಸ್ಥಾಪಕರು, ರಾಜ್ಯ ಅಗ್ರಗಣ್ಯೇಯ ಬ್ಯಾಂಕ್ (ಸಿಂಡಿಕೇಟ್ ಬ್ಯಾಂಕ್), ಗಾಂಧಿ ನಗರ, ಬೆಂಗಳೂರು | ಸದಸ್ಯರು |
| 9. | ಸ್ಕೀಮ್ ಮ್ಯಾನೇಜ್‌ಮೆಂಟ್ ಏಜೆನ್ಸಿ (ನೂತನ ಜವಳಿ ನೀತಿ 2013–18) ಇದರ ಪ್ರತಿನಿಧಿ | ಸದಸ್ಯರು |

**ಸದರಿ ಸಮಿತಿಯ ಪ್ರಮುಖ ಉದ್ದೇಶಗಳು :**

1. ಸಮಿತಿಯು ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆ ಸೇರಿ ನೂತನ ಜವಳಿ ನೀತಿ 2013–18ರಡಿ ಎಂ.ಎಸ್.ಎಂ.ಇ. ಪ್ರಾಜೆಕ್ಟ್‌ನ ಪ್ರೋತ್ಸಾಹನ ಮತ್ತು ಉತ್ತೇಜನಗಳ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿ ಮಂಜೂರಾತಿ ನೀಡತಕ್ಕದ್ದು.
2. ಸಮಿತಿ ಅನುಮೋದನೆ ನೀಡಿದ ಪ್ರಸ್ತಾವನೆಗಳಿಗೆ ನಿಯಮಾನುಸಾರ ಪ್ರೋತ್ಸಾಹನ ಮತ್ತು ಉತ್ತೇಜನಗಳ ಮೊತ್ತವನ್ನು ಆಯವ್ಯಯದ ಲಭ್ಯತೆಗೆ ಅನುಗುಣವಾಗಿ ಜವಳಿ ಅಭಿವೃದ್ಧಿ ಆಯುಕ್ತರು ಬಿಡುಗಡೆ ಮಾಡತಕ್ಕದ್ದು.
3. ಮೆಗಾ ಪ್ರಾಜೆಕ್ಟ್‌ಗಳು ಗ್ರೀನ್ ಫೀಲ್ಡ್ ಟೆಕ್ಸ್‌ಟೈಲ್ ಪಾರ್ಕ್, ಬ್ರೌನ್ ಫೀಲ್ಡ್ ಟೆಕ್ಸ್‌ಟೈಲ್ ಪಾರ್ಕ್ ಮತ್ತು ನಿರ್ದಿಷ್ಟ ಹಿಂದುಳಿದ ಪ್ರದೇಶದಲ್ಲಿ ಜವಳಿ ಉದ್ದಿಮೆಗಳ ಸ್ಥಾಪನೆಯ ಪ್ರಾಜೆಕ್ಟ್ ಮುಂತಾದ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಪ್ರೋತ್ಸಾಹನ ಮತ್ತು ಉತ್ತೇಜನಗಳ ಅನುಮೋದನೆಗೆ ರಾಜ್ಯಮಟ್ಟದ ಯೋಜನಾ ಅನುಷ್ಠಾನ ಸಮಿತಿ ಸಭೆಯ ಮುಂದೆ ಸೂಕ್ತ ಶಿಫಾರಸ್ಸುಗಳನ್ನು ಮಾಡಿ, ಅಂತಹ ಪ್ರಸ್ತಾವನೆಗಳನ್ನು ಮಂಡಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಜಗದೀಶ್**

**PR. 674** ಪೀಠಾಧಿಕಾರಿ (ಜವಳಿ) (ಪ್ರಭಾರ),

**SC-100** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಹುಬ್ಬಳ್ಳಿ–ಧಾರವಾಡ ಕುಶಲಕರ್ಮಿ ತರಬೇತಿ ಸಂಸ್ಥೆಯ ವ್ಯಾಪ್ತಿಯಲ್ಲಿನ 8.80 ಗುಂಟೆ ಜಾಗವನ್ನು ಸಾರ್ವಜನಿಕರಿಗೆ ರಸ್ತೆ ನಿರ್ಮಾಣಕ್ಕಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಬಿಟ್ಟು ಕೊಡುವ ಬಗ್ಗೆ.

**ಓದಲಾಗಿದೆ :**

1. ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಪತ್ರ ಸಂಖ್ಯೆ : ಜಿಕೈಕೇ/ಸಿ2/45/2011–12, ದಿನಾಂಕ : 07–11–2011 ಮತ್ತು 12–03–2012.
2. ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯದ ಪತ್ರ ಸಂಖ್ಯೆ : ಜಿಕೈಕೇ/ಸಿ2/45/2013/142, ದಿನಾಂಕ: 04–09–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಹುಬ್ಬಳ್ಳಿ–ಧಾರವಾಡ ಕುಶಲಕರ್ಮಿ ತರಬೇತಿ ಸಂಸ್ಥೆಯ ವ್ಯಾಪ್ತಿಯಲ್ಲಿನ ಸರ್ವೆ ನಂಬರ್ : ಸಿಟಿಎಸ್ 91, ವಾರ್ಡ್ ನಂಬರ್–03 ರಲ್ಲಿನ 8.80 ಗುಂಟೆ ಜಾಗವನ್ನು ಸಾರ್ವಜನಿಕರಿಗೆ ರಸ್ತೆ ನಿರ್ಮಾಣಕ್ಕಾಗಿ ಉಚಿತವಾಗಿ ಹುಬ್ಬಳ್ಳಿ–

ಧಾರವಾಡ ಮಹಾನಗರ ಪಾಲಿಕೆಗೆ ಬಿಟ್ಟುಕೊಡುವಂತೆ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಧಾರವಾಡರವರು ಇಲಾಖೆಯ ಮುಖ್ಯಸ್ಥರನ್ನು ಕೋರಿದ್ದು, ಅದರಂತೆ ಸದರಿ ಜಾಗವನ್ನು ಸಾರ್ವಜನಿಕರಿಗೆ ರಸ್ತೆ ನಿರ್ಮಾಣಕ್ಕಾಗಿ ಉಚಿತವಾಗಿ ನೀಡಲು ಇಲಾಖೆಯ ಆಕ್ಷೇಪಣೆ ಇರುವುದಿಲ್ಲ ಎಂದು ಹಾಗೂ ಸದರಿ ಪ್ರಸ್ತಾವನೆಯನ್ನು ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರು ಅನುಮೋದನೆ ಮೇರೆಗೆ ಸಲ್ಲಿಸಿರುವುದಾಗಿ ಅಪರ ನಿರ್ದೇಶಕರು (ಜಿಕೈಕೇ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ತಿಳಿಸಿರುತ್ತಾರೆ. ಆದಾಗ್ಯೂ ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆರವರು ದಿನಾಂಕ : 07–04–2012 ರಂದು ಸದರಿ ಸ್ಥಳಕ್ಕೆ ಭೇಟಿ ನೀಡಿ ಹಾಗೂ ಪರಿಶೀಲನೆ ಮಾಡಿ ಸದರಿ ರಸ್ತೆಯನ್ನು ಕಾಲುದಾರಿಯಾಗಿ ಉಪಯೋಗಿಸುತ್ತಿರುವುದು ಕಂಡುಬಂದ ಕಾರಣ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪ್ರಸ್ತಾವನೆಯನ್ನು ಅಂಗೀಕರಿಸಲು ಅರ್ಹವಾಗಿರುತ್ತದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ಉಪಯೋಗಕ್ಕಾಗಿ ಕುಶಲಕರ್ಮಿ ತರಬೇತಿ ಸಂಸ್ಥೆಯ ವ್ಯಾಪ್ತಿಯಲ್ಲಿನ ಸರ್ವೆ ನಂಬರ್ : ಸಿಟಿಎಸ್ 91, ವಾರ್ಡ್ ನಂಬರ್–03 ರಲ್ಲಿನ 8.80 ಗುಂಟೆ ಜಾಗವನ್ನು ಬಿಟ್ಟುಕೊಡುವ ಬಗ್ಗೆ ನಕ್ಷೆ/ಛಾಯಾ ಚಿತ್ರವನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಾಕೈ 16 ಕೈಯೋವಿ 2011, ಬೆಂಗಳೂರು, ದಿನಾಂಕ : 06–08–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ಒಳಪಟ್ಟಿರುವ ಹುಬ್ಬಳ್ಳಿ–ಧಾರವಾಡ ಕುಶಲಕರ್ಮಿ ತರಬೇತಿ ಸಂಸ್ಥೆಯ ವ್ಯಾಪ್ತಿಯಲ್ಲಿನ ಸರ್ವೆ ನಂಬರ್ : ಸಿಟಿಎಸ್ 91, ವಾರ್ಡ್ ನಂಬರ್–03 ರಲ್ಲಿನ 8.80 ಗುಂಟೆ ಜಾಗವನ್ನು ಸಾರ್ವಜನಿಕರಿಗೆ ರಸ್ತೆ ನಿರ್ಮಾಣಕ್ಕಾಗಿ ಮಾತ್ರ ಉಚಿತವಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಬಿಟ್ಟುಕೊಡಲು ಸರ್ಕಾರವು ಮಂಜೂರಾತಿ ನೀಡಿದೆ.

ಸದರಿ ಜಾಗವನ್ನು ಉಚಿತವಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಗೆ ಬಿಟ್ಟುಕೊಡುವ ಬಗ್ಗೆ ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರು ಮುಂದಿನ ಕ್ರಮಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

**PR. 675**

**SC-25**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬೆಂಗಳೂರು ಶಾಸಕರ ಭವನ ಆವರಣದಲ್ಲಿ ಬಹುಮಹಡಿ ಪಾರ್ಕಿಂಗ್ ಕಟ್ಟಡದ ಮೇಲೆ 1ನೇ ಮಹಡಿಯಿಂದ 5ನೇ ಮಹಡಿಯಲ್ಲಿ ಸಾಂಸಾರಿಕ ಕೊಠಡಿಗಳ ಕಟ್ಟಡ ನಿರ್ಮಾಣ ಮಾಡುವ ಕಾಮಗಾರಿಯ ರೂ. 3500.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** ಮು.ಇಂ ಸಂಕ (ದ) ಬೆಂಗಳೂರು ಇವರ ಪತ್ರ ಸಂಖ್ಯೆ : ಮುಅ.ಸಂಕದ : ಕನಿಶಾ : ಸಇ–5 : 2013–14, ದಿನಾಂಕ : 27–03–2014.

**ಪ್ರಸ್ತಾವನೆ :**

ಮೇಲೆ ಓದಲಾದ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ ರವರ ಪತ್ರದಲ್ಲಿ ಬೆಂಗಳೂರಿನ ಶಾಸಕರ ಭವನವು ಒಟ್ಟು 4 ಭವನಗಳನ್ನು ಹೊಂದಿರುತ್ತದೆ. ಶಾಸಕರ ಭವನ–1 ಇದನ್ನು 1962ರಲ್ಲಿ ನಿರ್ಮಿಸಲಾಗಿದ್ದು, ಈ ಭವನದಲ್ಲಿ 86 ಸಂಖ್ಯೆಯ ಸಾಂಸಾರಿಕ ಕೊಠಡಿಗಳು, 2 ಸಂಖ್ಯೆಯ ವಿಐಪಿ ಕೊಠಡಿಗಳು ಇರುತ್ತವೆ. ಶಾಸಕರ ಭವನ–2ನ್ನು ವಿವಿಧ ಹಂತಗಳಲ್ಲಿ ವಿವಿಧ ವರ್ಷಗಳಲ್ಲಿ ಕ್ರಮವಾಗಿ, ಮೊದಲನೇ ಹಂತ–1977, ಎರಡನೇ ಹಂತ–1978, ಮೂರನೇ ಹಂತ–1981–82ರಲ್ಲಿ ನಿರ್ಮಿಸಲಾಗಿರುತ್ತದೆ. ಈ ಭವನದಲ್ಲಿ 38 ಸಂಖ್ಯೆಯ ಸಾಂಸಾರಿಕ ಕೊಠಡಿಗಳು, 2 ಸಂಖ್ಯೆಯ ವಿಐಪಿ ಕೊಠಡಿಗಳು, 41 ಸಂಖ್ಯೆಯ ಡಬಲ್ ರೂಂಗಳ ಕೊಠಡಿಗಳು, 40 ಸಂಖ್ಯೆಯ ಸಿಂಗಲ್ ರೂಂಗಳ ಕೊಠಡಿಗಳು ಹೊಂದಿರುತ್ತವೆ. ಶಾಸಕರ ಭವನ–3ವು 1995ರಲ್ಲಿ ನಿರ್ಮಾಣವಾಗಿದ್ದು, ಇದರಲ್ಲಿ 30 ಸಂಖ್ಯೆಯ ಸಿಂಗಲ್ ರೂಂಗಳ ಕೊಠಡಿಗಳಿರುತ್ತವೆ. ಶಾಸಕರ ಭವನ–4ನ್ನು 2000–2006ರಲ್ಲಿ ನಿರ್ಮಿಸಿದ್ದು, ಇದರಲ್ಲಿ 68 ಸಂಖ್ಯೆಯ ಸಾಂಸಾರಿಕ ಕೊಠಡಿಗಳು, 2 ಸಂಖ್ಯೆಯ ವಿಐಪಿ ಕೊಠಡಿಗಳು ಮತ್ತು 5 ಅತಿಥಿಗೃಹಗಳನ್ನು ಹೊಂದಿರುತ್ತದೆ. ಈ ರೀತಿ ಒಟ್ಟು 192 ಸಾಂಸಾರಿಕ ಕಟ್ಟಡಗಳು, 41 ಸಂಖ್ಯೆಯ ಡಬಲ್ ರೂಂಗಳು, 6 ಸಂಖ್ಯೆಯ ವಿಐಪಿ ರೂಂಗಳು, 79 ಸಂಖ್ಯೆಯ ಸಿಂಗಲ್ ರೂಂಗಳು, 5 ಸಂಖ್ಯೆಯ ಅತಿಥಿಗೃಹಗಳನ್ನು ಹೊಂದಿರುತ್ತದೆ.

2) ಕರ್ನಾಟಕ ವಿಧಾನ ಸಭೆಯ ವಸತಿ ಸೌಕರ್ಯ ಸಮಿತಿಯು ದಿನಾಂಕ : 12–08–2010ರ ಸಭೆಯಲ್ಲಿ ಶಾಸಕರ ಭವನದ ಆವರಣದಲ್ಲಿ ಬಹುಮಹಡಿ ವಾಹನ ನಿಲ್ದಾಣ ಕಟ್ಟಡ ಮತ್ತು ಸಾಂಸಾರಿಕ ಕೊಠಡಿಗಳ 5 ಮಹಡಿಗಳ ಕಟ್ಟಡವನ್ನು ನಿರ್ಮಿಸಲು ನಿರ್ಣಯ ಕೈಗೊಂಡು ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳಿಗೆ ನಕ್ಷೆ ತಯಾರಿಸಲು ನಿರ್ದೇಶಿಸಿರುತ್ತಾರೆ. ಅದರಂತೆ ಪ್ರಧಾನ ಮುಖ್ಯ ವಾಸ್ತುಶಿಲ್ಪಿಗಳು ನಕ್ಷೆಯನ್ನು ತಯಾರಿಸಿ ದಿನಾಂಕ : 13–08–2012ರಂದು ಅಂದಿನ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ ಇವರಿಂದ ಅನುಮೋದನೆ ಪಡೆದಿರುತ್ತಾರೆ. ಈ ಅನುಮೋದಿತ ನಕ್ಷೆಯಂತೆ ವಾಹನ ನಿಲುಗಡೆಗೆ ತಳಮಹಡಿ–1ರ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು, ಕಾಮಗಾರಿಯು ಮುಕ್ತಾಯ ಹಂತದಲ್ಲಿರುತ್ತದೆ. ಪ್ರಸ್ತುತ ಪ್ರಗತಿಯಲ್ಲಿರುವ ತಳಮಹಡಿ–1ರ ಕಟ್ಟಡದ ಮೇಲೆ ವಾಹನ ನಿಲುಗಡೆ ತಳಮಹಡಿ–2, ನೆಲಮಹಡಿ ಕಟ್ಟಡ ಹಾಗೂ 1ನೇ ಮಹಡಿಯಿಂದ 5ನೇ ಮಹಡಿಯವರೆಗೆ ಸಾಂಸಾರಿಕ ಕೊಠಡಿಗಳ ಕಟ್ಟಡವನ್ನು ನಿರ್ಮಿಸಲು ರೂ. 35.00 ಕೋಟಿಗಳ ಅಂದಾಜು ಪತ್ರಿಕೆಯನ್ನು ಪ್ರಧಾನ ಮುಖ್ಯ ವಾಸ್ತುಶಿಲ್ಪಿಯವರು ತಯಾರಿಸಿ ಹಾಗೂ ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ ಇವರಿಂದ ಅನುಮೋದನೆಯನ್ನು ಪಡೆದು ನಕ್ಷೆಯಂತೆ ಈ ಅಂದಾಜು ಪತ್ರಿಕೆಯನ್ನು 2013–14ನೇ ಸಾಲಿನ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತದ ದರಪಟ್ಟಿಯನ್ವಯ ತಯಾರಿಸಿರುತ್ತಾರೆಂದು ತಿಳಿಸಿ, ಈ ಕಾಮಗಾರಿಯಲ್ಲಿ ನಿರ್ಮಿಸಲಾಗುತ್ತಿರುವ ಕಟ್ಟಡದ ವಿವಿಧ ಮಹಡಿಗಳ ವಿಸ್ತೀರ್ಣ ಈ ಕೆಳಗಿನಂತಿರುತ್ತದೆಂದು ತಿಳಿಸಿರುತ್ತಾರೆ.

| ಮಹಡಿಗಳು | ವಿಸ್ತೀರ್ಣ |
|---|---|
| ತಳಮಹಡಿ–2 | 1676.00 ಚ.ಮೀ. |
| ನೆಲಮಹಡಿ | 1427.00 ಚ.ಮೀ. |
| 1ನೇ ಮಹಡಿಯಿಂದ 5ನೇ ಮಹಡಿಯವರೆಗೆ | 7385.00 ಚ.ಮೀ. |
| **ಒಟ್ಟು** | **10488.00 ಚ.ಮೀ.** |

3) ಪ್ರಸ್ತಾಪಿತ ಕಾಮಗಾರಿಯ ಅಂದಾಜು ಪತ್ರಿಕೆಯಲ್ಲಿನ ವಿವರಗಳು ಕೆಳಗಿನಂತಿರುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ |
|---|---|---|
| 1. | ಸಿವಿಲ್ ಕಾಮಗಾರಿಗಳು–2 ಮಹಡಿಗಳ ವಾಹನ ನಿಲುಗಡೆ+ ಸಾಂಸಾರಿಕ ಕೊಠಡಿಗಳ 5 ಮಹಡಿಗಳು | 2275.06 |
| 2. | ನೀರು ಸರಬರಾಜು ಮತ್ತು ನೈರ್ಮಲೀಕರಣ | 95.00 |
| 3. | ವಿದ್ಯುಚ್ಛಕ್ತಿ ಸಂಪರ್ಕ (HT power supply, LT control panel, Yard, lighting, 30 KVA DG set, BESCOM depostis etc.,) | 100.00 |
| 4. | 4 ಸಂಖ್ಯೆಯ ಲಿಫ್ಟ್‌ಗಳು | 120.00 |
| 5. | ಕಿಟಕಿ ಮತ್ತು ಬಾಗಿಲುಗಳು | 15.00 |
| 6. | BWSSB ವೆಚ್ಚ | 5.00 |
| 7. | ಪೀಠೋಪಕರಣ (Cots, sofas, tables, ward robe etc.,) | 435.00 |
| 8. | ಮಳೆ ನೀರು ಕೊಯ್ಲು | 20.00 |
| 9. | ಸೋಲಾರ್ ಅಳವಡಿಕೆ | 25.00 |
| 10. | ಫೈರ್ ಫೈಟಿಂಗ್ ಕೆಲಸಗಳು | 45.00 |
| 11. | ಹೊರಾಂಗಣ ವಿನ್ಯಾಸ ಕೆಲಸಗಳು | 40.00 |
| 12. | ಕಟ್ಟಡದ ವಾಸ್ತುಶಿಲ್ಪ ವಿನ್ಯಾಸ | 25.00 |
| 13. | ಆದೇಶ ಸಂಖ್ಯೆ : ಲೋಇ/12/ಆರ್‌ಡಿಎಫ್/2007/I. ದಿನಾಂಕ : 7–5–2008ರ ಪ್ರಕಾರ ಸಿವಿಲ್ ನೀರು ಸರಬರಾಜು ಮತ್ತು ವಿದ್ಯುಚ್ಛಕ್ತಿ ಸಂಪರ್ಕ ಕೆಲಸಗಳ ಮೇಲೆ 10% ಪ್ರೈಸ್ ಎಸ್ಕಲೇಷನ್ | 247.01 |
| 14. | ಆದೇಶ ಸಂಖ್ಯೆ : ಲೋಇ/12/ಆರ್‌ಡಿಎಫ್/2007/I. ದಿನಾಂಕ : 7–5–2008ರ ಪ್ರಕಾರ ಸಿವಿಲ್ ನೀರು ಸರಬರಾಜು ಮತ್ತು ವಿದ್ಯುಚ್ಛಕ್ತಿ ಸಂಪರ್ಕ ಕೆಲಸಗಳ ಮೇಲೆ 1% ಗುಣನಿಯಂತ್ರಣ ವೆಚ್ಚ | 24.70 |
| 15. | ಆದೇಶ ಸಂಖ್ಯೆ : ಲೋಇ/12/ಆರ್‌ಡಿಎಫ್/2007/I. ದಿನಾಂಕ : 7–5–2008ರ ಪ್ರಕಾರ ಸಿವಿಲ್ ನೀರು ಸರಬರಾಜು ಮತ್ತು ವಿದ್ಯುಚ್ಛಕ್ತಿ ಸಂಪರ್ಕ ಕೆಲಸಗಳ ಮೇಲೆ 1% ಆಕಸ್ಮಿಕ ವೆಚ್ಚ | 24.70 |
| 16. | ಇತರೆ | 3.54 |
| | **ಒಟ್ಟು ಮೊತ್ತ** | **3500.00** |

4) ಸದರಿ ಕಾಮಗಾರಿಯು 2013–14ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಅಪೆಂಡಿಕ್ಸ್–ಇ (ಮುಂದುವರೆದ ಕಾಮಗಾರಿಗಳು) ರಲ್ಲಿ ರೂ. 3500.00 ಲಕ್ಷಗಳ ಅಂದಾಜು ಮೊತ್ತ ಹಾಗೂ ಪ್ರಸಕ್ತ ಸಾಲಿಗೆ ರೂ. 1400.00 ಲಕ್ಷಗಳ ಅನುದಾನದೊಂದಿಗೆ ಲೆಕ್ಕಶೀರ್ಷಿಕೆ 4216–01–700–2–01–386–ನಿವಾಸಿ ಕಟ್ಟಡಗಳು ಅಡಿಯಲ್ಲಿ ಸೇರ್ಪಡೆಯಾಗಿರುತ್ತದೆ. ಸದರಿ ಕಾಮಗಾರಿಯ ಅಂದಾಜು ಪಟ್ಟಿಯನ್ನು ದಿನಾಂಕ : 25–03–2014ರಂದು ರಾಜ್ಯ ಮಟ್ಟದ ತಾಂತ್ರಿಕ ಸಲಹಾ ಮತ್ತು ಅಂದಾಜು ಪಟ್ಟಿ ಪರಿಶೀಲನಾ ಸಮಿತಿಯ ಸಭೆಯಲ್ಲಿ ಪರಿಶೀಲಿಸಲಾಗಿರುತ್ತದೆ.

5) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 213 ಬಿಎಂಎಸ್ 2014, ಬೆಂಗಳೂರು, ದಿನಾಂಕ : 26ನೇ ಆಗಸ್ಟ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರಿನ ಶಾಸಕರ ಭವನ ಆವರಣದಲ್ಲಿ ಬಹುಮಹಡಿ ಪಾರ್ಕಿಂಗ್ ಕಟ್ಟಡದ ಮೇಲೆ 1ನೇ ಮಹಡಿಯಿಂದ 5ನೇ ಮಹಡಿವರೆಗೆ ಪ್ರತಿ ಮಹಡಿಯಲ್ಲಿ ತಲಾ 10 ಸಾಂಸಾರಿಕ ಕೊಠಡಿಗಳ ನಿರ್ಮಾಣ ಮಾಡುವ ಕಾಮಗಾರಿಯ ರೂ. 3500.00 (ಮೂರು ಸಾವಿರದ ಐದುನೂರು ಲಕ್ಷಗಳು ಮಾತ್ರ) ಲಕ್ಷಗಳ ಅಂದಾಜು ಪಟ್ಟಿಗೆ ಸದರಿ ಕಾಮಗಾರಿಯ ಅಂದಾಜು ಮೊತ್ತವನ್ನು 2014–15ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಸೇರಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು

ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

PR. 677

## ಕಂದಾಯ ಸಚಿವಾಲಯ

**ವಿಷಯ :** ಕೇಂದ್ರ ಸರ್ಕಾರ ಸ್ವಾಮ್ಯದ ಹಿಂದೂಸ್ತಾನ್ ಏರೋನಾಟಿಕಲ್ ಲಿಮಿಟೆಡ್ (ಹೆಚ್.ಎ.ಎಲ್) ಬೆಂಗಳೂರು ಇವರಿಗೆ ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು ನಿಟ್ಟೂರು ಹೋಬಳಿ, ಬಿದರೆಹಳ್ಳ ಕಾವಲ್‌ನಲ್ಲಿ ಸರ್ಕಾರಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್ಎನ್‌ಡಿ (ಟಿಎಂಕೆ) ಸಿಆರ್–215/2012–13 ದಿನಾಂಕ : 16–11–2013 ಮತ್ತು 01–03–2014.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ಕೇಂದ್ರ ಸರ್ಕಾರ ಸ್ವಾಮ್ಯದ ಹಿಂದೂಸ್ತಾನ್ ಏರೋನಾಟಿಕಲ್ ಲಿಮಿಟೆಡ್ (ಹೆಚ್.ಎ.ಎಲ್) ಬೆಂಗಳೂರು ಇವರಿಗೆ ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು ನಿಟ್ಟೂರು ಹೋಬಳಿ, ಬಿದರೆಹಳ್ಳ ಕಾವಲ್‌ನಲ್ಲಿರುವ 929 ಎಕರೆ 34 ಗುಂಟೆ ಜಮೀನಿನ ಪೈಕಿ 610 ಎಕರೆ ಜಮೀನನ್ನು ಗುರುತಿಸಲಾಗಿದ್ದು ಹಾಗೂ ರೆವಿನ್ಯೂ ನಕ್ಷೆಯ ಪ್ರಕಾರ ಬ್ಲಾಕ್ ನಂ. 91, 92, 93, 12, 13, 14, 15, ಹಾಗೂ 117 ಮತ್ತು 118 ರಂತೆ ಮಂಜೂರಾತಿ ಜಮೀನುಗಳಾಗಿರುವುದರಿಂದ ಈ ಜಮೀನುಗಳನ್ನು ಸಹ ಕಾಯ್ದಿರಿಸಲಾದ ಪ್ರದೇಶಕ್ಕೆ ಸ್ಥಳಾಂತರಿಸುವ ಕುರಿತು ಪ್ರಸ್ತಾಪಿಸುತ್ತಾ, ಬಿದರೆಹಳ್ಳ ಕಾವಲ್‌ನಲ್ಲಿರುವ 929 ಎಕರೆ 34 ಗುಂಟೆ ಜಮೀನಿನ ಪೈಕಿ 610 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

ಮೆ॥ ಹಿಂದೂಸ್ತಾನ ಏರೋನಾಟಿಕ್ಸ್ ಲಿ., (ಹೆಚ್.ಎ.ಎಲ್) ಬೆಂಗಳೂರು ಇದು ಭಾರತ ಸರ್ಕಾರದ ರಕ್ಷಣಾ ಮಂತ್ರಾಲಯದ ಪ್ರಮುಖ ಸಾರ್ವಜನಿಕ ಉದ್ದಿಮೆಯಾಗಿರುತ್ತದೆ. 1940ನೇ ಸಾಲಿನಲ್ಲಿ ಬೆಂಗಳೂರಿನಲ್ಲಿ ಮೆ॥ ಹಿಂದೂಸ್ತಾನ್ ಏರೋನಾಟಿಕ್ಸ್ ಲಿ., (ಹೆಚ್.ಎ.ಎಲ್) ನವರು ವಿಮಾನ ಮತ್ತು ಹೆಲಿಕಾಪ್ಟರ್ ಓವರ್‌ಹೌಲಿಂಗ್ ಮತ್ತು ದುರಸ್ತಿಗಾಗಿ ಘಟಕವೊಂದನ್ನು ಸ್ಥಾಪಿಸಿದ್ದರಿಂದ ಕರ್ನಾಟಕದಲ್ಲಿ ವಾಯುಯಾನ ಚಟುವಟಿಕೆಗಳು ಪ್ರಾರಂಭವಾಗಿದ್ದು ಸುಮಾರು 75 ವರ್ಷಗಳಲ್ಲಿ ಮೆ॥ ಹೆಚ್.ಎ.ಎಲ್. ನವರು ಸಾಕಷ್ಟು ಬಂಡವಾಳ ಹೂಡಿಕೆಯೊಂದಿಗೆ ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿ, ಸ್ಥಳೀಯ ಜನರಿಗೆ ಉದ್ಯೋಗಾವಕಾಶ ಕಲ್ಪಿಸಿರುವುದಾಗಿ ತಿಳಿಸಿರುತ್ತಾರೆ.

ಮೆ॥ ಹೆಚ್.ಎ.ಎಲ್. ನವರು Light Combat Helicopter (LCH) Light Utility Helicopter (LUC), Naval Multi-role Helicopter (NMRH) and Indian Multi Role Helicopter (IMRH) ಗಳನ್ನು ತಯಾರಿಸುವ, ಓವರ್‌ಹೌಲ್ ಮತ್ತು ದುರಸ್ತಿ ಮಾಡುವ ಹೊಸ ಘಟಕವೊಂದನ್ನು ಸ್ಥಾಪಿಸುವ ಪ್ರಸ್ತಾವನೆಯೊಂದನ್ನು ಸರ್ಕಾರದ ಮುಂದಿಟ್ಟಿರುತ್ತಾರೆ. ಈ ಘಟಕದಲ್ಲಿ ಮೆ॥ ಹೆಚ್ಎಎಲ್ ನವರು ಸುಮಾರು ರೂ. 4000 ಕೋಟಿಗಳಷ್ಟು ಮೊತ್ತದ ಬಂಡವಾಳವನ್ನು ಹೂಡಲು ಬಯಸಿದ್ದು. ಸುಮಾರು 3000 ಜನರಿಗೆ ಉದ್ಯೋಗಾವಕಾಶ ಸೃಜನೆಯಾಗಬಹುದೆಂದು ಅಂದಾಜಿಸಲಾಗಿರುತ್ತದೆ. ಈ ಸಂಬಂಧವಾಗಿ ರಾಜ್ಯ ಸರ್ಕಾರ ನೀಡಬೇಕಾಗಿರುವ ಮೂಲಭೂತ ಸೌಕರ್ಯಗಳ

ಸಂಸ್ಥೆಯು ಪ್ರಸ್ತಾಪಿಸಿರುವಂತೆ ಯೋಜನೆಯ ಪ್ರಮುಖ ಲಕ್ಷಣಗಳು/ಗುಣಗಳು ಕೆಳಗಿನಂತಿರುತ್ತವೆ.

- **ಪ್ರಸ್ತಾಪಿಸಿದ ಬಂಡವಾಳ ಹೂಡಿಕೆ :** ಪ್ರಾರಂಭದಲ್ಲಿ ಸುಮಾರು ರೂ. 4000 ಕೋಟಿಗಳು
- **ಪ್ರಸ್ತಾಪಿಸಿದ ವಹಿವಾಟು :** ವಾರ್ಷಿಕವಾಗಿ ಸುಮಾರು ರೂ. 2000 ಕೋಟಿಗಳು
- **ಪ್ರಸ್ತಾಪಿಸಿದ ಉತ್ಪಾದನಾ ಸಾಮರ್ಥ್ಯ :** ಪೂರ್ಣ ಪ್ರಮಾಣದ ಸಾಮರ್ಥ್ಯದಲ್ಲಿ ಕೆಲಸ ನಿರ್ವಹಿಸಿದಾಗ ವಾರ್ಷಿಕವಾಗಿ 50 ಹೆಲಿಕಾಪ್ಟರ್‌ಗಳು
- **ಪ್ರಸ್ತಾಪಿಸಿದ ಮಾನವ ಸಂಪನ್ಮೂಲ ಸುಮಾರು** 3000 ದಿಂದ 4000 ಸಿಬ್ಬಂದಿವರ್ಗ
- **ಪ್ರಸ್ತಾಪಿಸಿದ ವಾಯು ಉಡ್ಡಯನ ಸೌಕರ್ಯ :** ಹೆಲಿಕಾಪ್ಟರ್ ಉಡ್ಡಯನ ಮತ್ತು ಟಾರ್ಮ್ಯಾಕ್ ಪಾರ್ಕಿಂಗ್.

ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ : 01–03–2014 ರಂದು ನಡೆದ ಸಭೆಯಲ್ಲಿ, ಕೇಂದ್ರ ಸರ್ಕಾರದ ಸ್ವಾಮ್ಯದ ಹಿಂದೂಸ್ತಾನ ಏರೋನಾಟಿಕಲ್ ಸಂಸ್ಥೆಗೆ ಬಿದರೆಹಳ್ಳ ಕಾವಲ್‌ನ ಬ್ಲಾಕ್–ಎ, ಬಿ, ಸಿ ಮತ್ತು ಡಿಯ 610–00 ಎಕರೆ ಜಮೀನನ್ನು ಕಂದಾಯ ಇಲಾಖೆಯು ಕರ್ನಾಟಕ ಭೂ ಮಂಜೂರಾತಿ ನಿಯಮ 1969ರನ್ವಯ ಮಂಜೂರು ಮಾಡಲು ಹಾಗೂ ಎಕರೆ ಒಂದಕ್ಕೆ ರೂ. 100 (ಒಂದು ಲಕ್ಷ ರೂಪಾಯಿಗಳು ಮಾತ್ರ) ವಿಧಿಸಿ ಕೆಲವು ಷರತ್ತುಗಳೊಂದಿಗೆ ಆದೇಶ ಹೊರಡಿಸುವ ಬಗ್ಗೆ ತೀರ್ಮಾನಿಸಲಾಗಿರುತ್ತದೆ.

ಈ ಪ್ರಸ್ತಾವನೆ ಕುರಿತು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ದಿನಾಂಕ : 26–06–2014ರಂದು ನಡೆದ ರಾಜ್ಯ ಸಚಿವ ಸಂಪುಟ ಸಭೆಯ ಮುಂದೆ ಮಂಡಿಸಿ ಅನುಮೋದನೆ ಪಡೆದಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 53 ಎಲ್‌ಜಿಟಿ 2013, ಬೆಂಗಳೂರು, ದಿನಾಂಕ : 21–08–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ನಿಟ್ಟೂರು ಹೋಬಳಿ, ಬಿದರೆಹಳ್ಳ ಕಾವಲ್‌ನ ಅಮೃತಮಹಲ್ ಕಾವಲ್ ಎಂದು ಹೆಸರಿಸಲಾದ ಜಮೀನಿನ ಪೈಕಿ ಪಶುಸಂಗೋಪನಾ ಇಲಾಖೆಯಿಂದ ಕಂದಾಯ ಇಲಾಖೆಗೆ ವರ್ಗಾವಣೆಯಾದ 929–34 ಎಕರೆ ಜಮೀನಿನ ಪೈಕಿ 610 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮ 1969ರನ್ವಯ ಎಕರೆ ಒಂದಕ್ಕೆ ರೂ. 1–00 ಲಕ್ಷ (ಒಂದು ಲಕ್ಷ ರೂಪಾಯಿಗಳು ಮಾತ್ರ) ವಿಧಿಸಿ ಕೇಂದ್ರ ಸರ್ಕಾರ ಸ್ವಾಮ್ಯದ ಹಿಂದೂಸ್ತಾನ್ ಏರೋನಾಟಿಕಲ್ ಲಿ., (ಹೆಚ್.ಎ.ಎಲ್), ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಹಸ್ತಾಂತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

1) ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.

2) ಭೂ ಮಂಜೂರಾತಿ ಸಂದರ್ಭದಲ್ಲಿ ಅನಾವಶ್ಯಕ ವ್ಯಾಜ್ಯಗಳಿಗೆ ಎಡೆಮಾಡಿಕೊಡದ ಹಾಗೆ ಹೆಚ್.ಎ.ಎಲ್. ಉದ್ದಿಮೆಯು ಸ್ಥಳೀಯರಿಗೆ ಉದ್ಯೋಗ ಅವಕಾಶಕ್ಕೆ ಆದ್ಯತೆ ನೀಡುವುದು.
3) ಉದ್ದೇಶಿತ ಯೋಜನಾ ಪ್ರದೇಶದಲ್ಲಿ ಕೆಲವೊಂದು ಹಳ್ಳಿಗಳು ಇರುವುದರಿಂದ ಉದ್ದಿಮೆಯು ಸುತ್ತಮುತ್ತಲಿನ ಹಳ್ಳಿಗಳಿಗೆ ಅಗತ್ಯವಾದ ದಾರಿಯನ್ನು (Safe Passage) ಕಲ್ಪಿಸುವುದು.
4) ಸರ್ಕಾರದ ಆದೇಶ ಸಂಖ್ಯೆ : ಸಿಐ 47 ಎಸ್‌ಪಿಐ 2013 ದಿನಾಂಕ : 09-07-2014ರಲ್ಲಿ ವಿಧಿಸಲಾದ ಷರತ್ತುಗಳು ಯಥಾವತ್ತಾಗಿ ಅನ್ವಯಿಸುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಲ್. ಮಹಾಂತೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ-3).

**PR. 678**
**SC-100**

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ತೇರದಾಳ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10-10-2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17-01-2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಬಾಗಲಕೋಟೆ ಜಿಲ್ಲೆ, ತೇರದಾಳ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 80 ಮುಸರ 2013, ಬೆಂಗಳೂರು, ದಿನಾಂಕ : 07ನೇ ಜುಲೈ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಾಗಲಕೋಟೆ ಜಿಲ್ಲೆ, ತೇರದಾಳ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1. | ಶ್ರೀ ಮಹದೇವಪ್ಪ ಮಲ್ಲಪ್ಪ ಬರಗಿ, ಮಾರುತಿ ಟಾಕೀಸ್ ಹತ್ತಿರ, ಮಹಾಲಿಂಗಪುರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. (ಸಾಮಾನ್ಯ) | ಸದಸ್ಯರು |
| 2. | ಶ್ರೀಮತಿ ಕವಿತಾ ಕೆಂಚಪ್ಪ, ಕಡಕಬಾವಿ ಕೋಂ ಶ್ರೀ ಕೆಂಚಪ್ಪ ಚಿದಂಬರ್ ಕಡಕಬಾವಿ, ಮದಭಾವಿ ಗ್ರಾಮ ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ (ಮಹಿಳೆ) | ಸದಸ್ಯರು |
| 3. | ಶ್ರೀ ಸುರೇಶ್ ಪಾಂಡುಪವಾರ, ಲಂಬಾಣಿ ತಾಂಡ, ದೇವರಾಜನಗರ, ತೇರದಾಳ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ (ಪರಿಶಿಷ್ಟ ಜಾತಿ) | ಸದಸ್ಯರು |
| 4. | ಶ್ರೀ ಕಾಶಾರಾಯ ಸದಪ್ಪ ನಾಯಕ ನಾವಲಗಿ, ಬಾಗಲಕೋಟೆ ಜಿಲ್ಲೆ. (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**PR. 679**
**SC-25**

## ಕಂದಾಯ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಗಂಗಾವತಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10-10-2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17-01-2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ಕೊಪ್ಪಳ ಜಿಲ್ಲೆ, ಗಂಗಾವತಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 164 ಮುಸರ 2013, ಬೆಂಗಳೂರು, ದಿನಾಂಕ : 07ನೇ ಜುಲೈ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೊಪ್ಪಳ ಜಿಲ್ಲೆ, ಗಂಗಾವತಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ಮಲ್ಲನಗೌಡ ತಂದೆ ಶಿವರೆಡ್ಡೆಪ್ಪ, ಬುದೂರು, 14ನೇ ವಾರ್ಡ್ ಭಗತ್‌ಸಿಂಗ್ ನಗರ, ಗಂಗಾವತಿ (ಸಾಮಾನ್ಯ) | ಸದಸ್ಯರು |
| 2. | ಶ್ರೀಮತಿ ಈರಮ್ಮ ಗಂಡ ದ್ಯಾವಣ್ಣ, ತೆಗ್ಗಿಹಾಳ 01ನೇ ವಾರ್ಡ್, ನಂಜುಂಡೇಶ್ವರ ದೇವಸ್ಥಾನದ ಮಠದ ಹತ್ತಿರ ಬಸಾಪಟ್ಟಣ ತಾಲ್ಲೂಕು, ಗಂಗಾವತಿ (ಮಹಿಳೆ) | ಸದಸ್ಯರು |
| 3. | ಶ್ರೀ ರವಿಬಾಬು ತಾಯಿ ಲಕ್ಷ್ಮಮ್ಮ ಆರತಿ, 28ನೇ ವಾರ್ಡ್, ಛಲುವಾದಿ ಓಣಿ ಹಿರೇ ಜಂತಕಲ್, ಗಂಗಾವತಿ (ಪರಿಶಿಷ್ಟ ಜಾತಿ) | ಸದಸ್ಯರು |
| 4. | ಶ್ರೀ ಅಮರೇಶ ತಂದೆ ದುರುಗಪ್ಪ ಬಂಡಿ, ಮಲ್ಲಾಪುರ ಸಾ॥ ಗಂಗಾವತಿ ತಾಲ್ಲೂಕು (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

PR. 680 ಸರ್ಕಾರದ ಅಧೀನ ಕಾರ್ಯದರ್ಶಿ,

SC-25 ಕಂದಾಯ ಇಲಾಖೆ (ಮುಜರಾಯಿ).

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಕೊರಟಗೆರೆ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 67 ಮುಸರ 2007, ದಿನಾಂಕ : 10–10–2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 61 ಮುಆಬಿ 2013, ದಿನಾಂಕ : 17–01–2014.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 10–10–2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 17–01–2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ. ಅದರಂತೆ ತುಮಕೂರು ಜಿಲ್ಲೆ ಕೊರಟಗೆರೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 209 ಮುಸರ 2013, ಬೆಂಗಳೂರು, ದಿನಾಂಕ : 03ನೇ ಜುಲೈ, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಕೊರಟಗೆರೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ಉಮಾಶಂಕರ ಆರಾಧ್ಯ ಬಿನ್ ವೀರಯ್ಯ, ಹೆಚ್.ವಿ. ಪಾಳ್ಯ, ಕೋಡ್ಲಾಳ್ಳಿ ಅಂಚೆ, ಹೊಳವನಹಳ್ಳಿ ಹೋಬಳಿ, ಕೊರಟಗೆರೆ ತಾ॥ (ಸಾಮಾನ್ಯ) | ಸದಸ್ಯರು |
| 2. | ಶ್ರೀಮತಿ ಜಯಮ್ಮ ಕೋಂ ಶ್ರೀ ಚಿಕ್ಕಣ್ಣ, ಗುಂಡಿನಪಾಳ್ಯ, ಹುಲಿಕುಂಟೆ ಅಂಚೆ, ಕಸಬಾ ಹೋಬಳಿ, ಕೊರಟಗೆರೆ ತಾಲ್ಲೂಕು (ಮಹಿಳೆ) | ಸದಸ್ಯರು |
| 3. | ಶ್ರೀ ಬಿ.ಹೆಚ್. ವೆಂಕಟಪ್ಪ ಬಿನ್ ಶ್ರೀ ಹನುಮಂತಪ್ಪ, ಕ್ಯಾಶವಾರ ಅಂಚೆ, ಬಸವನಹಳ್ಳಿ, ಕೊರಟಗೆರೆ ತಾಲ್ಲೂಕು (ಪರಿಶಿಷ್ಟ ಜಾತಿ) | ಸದಸ್ಯರು |
| 4. | ಶ್ರೀ ಬಿ. ಲಕ್ಷ್ಮೀನರಸಪ್ಪ ಬಿನ್ ಬೊಮ್ಮಣ್ಣ, ಹೊಳವನಹಳ್ಳಿ, ಇಂದಿರಾ ಕಾಲೋನಿ ಕೊರಟಗೆರೆ ತಾಲ್ಲೂಕು (ಪರಿಶಿಷ್ಟ ಪಂಗಡ) | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ಜಯರಾಮೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

**PR. 681**

**SC-25**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ತಯಾರಿಸಲು ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ತಯಾರಿಸುವ ಬಗ್ಗೆ ದಿ:05.06.2014ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ತಯಾರಿಸುವ ಬಗ್ಗೆ ದಿ: 05.06.2014ರಂದು ನಡೆದ ಸಭೆಯ ನಡವಳಿಯಲ್ಲಿ, ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ತಯಾರಿಸಲು ಅನುಸರಿಸಬೇಕಾದ ಕಾರ್ಯವಿಧಾನಗಳ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ವರದಿ ನೀಡಲು 2 ಸಮಿತಿಗಳನ್ನು ರಚಿಸಲು ತೀರ್ಮಾನಿಸಲಾಗಿದೆ. ಅದರಲ್ಲಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಹಾಗೂ ನಿರ್ದೇಶಕರು, ಸ್ಟೇಟ್ ಇನ್ಸಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್(ಎಸ್‌ಐಆರ್‌ಡಿ) ಇವರುಗಳ ಅಧ್ಯಕ್ಷತೆಯಲ್ಲಿ ಕೆಳಕಂಡ ಸಮಿತಿಗಳನ್ನು ರಚಿಸಲು ಸರ್ಕಾರವು ತೀರ್ಮಾನಿಸಿ ಅದರಂತೆ ಕೆಳಕಂಡ ಆದೇಶ ಹೊರಡಿಸಿದೆ.

1) ಗ್ರಾಮ ಪಂಚಾಯತ್‌ಗಳಲ್ಲಿ ಸೇವಾ ಮಟ್ಟದ ಮಾನದಂಡ ವಿಷಯದ ಕುರಿತು.
   (Service Bench Marking of Gram Panchayat)
2) ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕ ತಯಾರಿಸುವ ಕುರಿತು.
   (Human Development Index for Gram Panchayat)

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 60 ಪಿಎಸ್‌ಡಿ 2014, ಬೆಂಗಳೂರು, ದಿನಾಂಕ: 26ನೇ ಜುಲೈ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕವನ್ನು ತಯಾರಿಸಲು ಅನುಸರಿಸಬೇಕಾದ ಕಾರ್ಯವಿಧಾನಗಳ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ವರದಿ ನೀಡಲು ಈ ಕೆಳಕಂಡ ಎರಡು ಸಮಿತಿಗಳನ್ನು ಕೂಡಲೇ ಜಾರಿಗೆ ಬರುವಂತೆ ಸರ್ಕಾರವು ರಚಿಸಿದೆ.

**1) ಗ್ರಾಮ ಪಂಚಾಯತ್‌ಗಳಲ್ಲಿ ಸೇವಾ ಮಟ್ಟದ ಮಾನದಂಡ ಕುರಿತು.**

**(Service Bench Marking of Gram Panchayat)**

| | | |
|---|---|---|
| 1 | ಶ್ರೀ ಕೆ. ಲಕ್ಷ್ಮೀಪತಿ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ | ಅಧ್ಯಕ್ಷರು |
| 2 | ಮುನ್ಸಿಪಲ್ ಪುನರ್ವಸತಿ ಕೋಶದ ಒಬ್ಬ ಅಧಿಕಾರಿ | ಸದಸ್ಯರು |

| | | |
|---|---|---|
| 3 | ಶ್ರೀ ನಂಜುಂಡರಾವ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 4 | ಶ್ರೀ ಯಲ್ಲಕ್ಕಿ ಗೌಡ, ಜಂಟಿ ನಿರ್ದೇಶಕರು, ಎಂಜಿಎನ್‌ಆರ್‌ಇಜಿಎ | ಸದಸ್ಯರು |
| 5 | ಶ್ರೀಮತಿ ವಸುಂಧರಾದೇವಿ, ಮುಖ್ಯ ಯೋಜನಾಧಿಕಾರಿಗಳು (ಸಿಪಿಓ), ಚಾಮರಾಜನಗರ ಜಿಲ್ಲಾ ಪಂಚಾಯತ್. | ಸದಸ್ಯರು |
| 6 | ಇಬ್ಬರು ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು(PDO) | ಸದಸ್ಯರು |
| 7 | ಉಪ ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಯೋಜನಾ ಮತ್ತು ಸಾಂಖ್ಯಿಕ ಇಲಾಖೆ. | ಸದಸ್ಯ ಕಾರ್ಯದರ್ಶಿ |

**2) ಗ್ರಾಮ ಪಂಚಾಯತ್ ಮಟ್ಟದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕ ತಯಾರಿಸುವ ಕುರಿತು.**

**(Human Development Index for Gram Panchayat)**

| | | |
|---|---|---|
| 1 | ಶ್ರೀ ಪಿ. ಶಿವಶಂಕರ್, ನಿರ್ದೇಶಕರು, ಸ್ಟೇಟ್ ಇನ್ಸಿಟ್ಯೂಟ್ ಆಫ್ ರೂರಲ್ ಡೆವಲಪ್‌ಮೆಂಟ್ (ಎಸ್‌ಐಆರ್‌ಡಿ) | ಅಧ್ಯಕ್ಷರು |
| 2 | ಡಾ॥ ಎಚ್. ಶಶಿಧರ್, ರಾಜ್ಯಮಟ್ಟದ ಸಮಾಲೋಚಕರು ಮತ್ತು ಸಂಯೋಜಕರು (ಎಸ್‌ಎಲ್‌ಸಿಸಿ) ಎಚ್.ಡಿ.ಡಿ, ಯೋಜನಾ ಇಲಾಖೆ. | ಸದಸ್ಯರು |
| 3 | ಶ್ರೀ ಶ್ರೀನಿವಾಸ್‌ರಾವ್, ಮುಖ್ಯ ಯೋಜನಾಧಿಕಾರಿಗಳು (ಸಿಪಿಓ) ಕೊಡಗು ಜಿಲ್ಲಾ ಪಂಚಾಯತ್. | ಸದಸ್ಯರು |
| 4 | ಶ್ರೀ ಗಣೇಶ್ ಪ್ರಸಾದ್, ಬೋಧಕರು, ಎಸ್‌ಐಆರ್‌ಡಿ | ಸದಸ್ಯರು |
| 5 | ಡಾ॥ ಎನ್.ಎಸ್. ಶೆಟ್ಟಿ, ಲೀಡ್ ಏಜೆನ್ಸಿ, ಉಡುಪಿ ಜಿಲ್ಲೆ | ಸದಸ್ಯರು |
| 6 | ಡಾ॥ ರಾಮಚಂದ್ರ ಬೈರೆ, ಡಿಹೆಚ್‌ಓ, ಮಂಗಳೂರು | ಸದಸ್ಯರು |
| 7 | ಪ್ರೊ. ಟಿ.ಆರ್. ಚಂದ್ರಶೇಖರ್, ಹೊಸಪೇಟೆ, ಬಳ್ಳಾರಿ ಜಿಲ್ಲೆ | ಸದಸ್ಯರು |
| 8 | ಶ್ರೀ ನಂಜುಂಡರಾವ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 9 | ಶ್ರೀಮತಿ ಕೆ. ವೈಜಯಂತಿ, ಅಕ್ಷರ ಫೌಂಡೇಷನ್, ಬೆಂಗಳೂರು | ಸದಸ್ಯರು |
| 10 | ಶ್ರೀ ಬಿ. ಜಾನಕಿರಾಮ್, ಹಿರಿಯ ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಯೋಜನಾ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ 2 ಸಮಿತಿಗಳು ಒಂದು ತಿಂಗಳ ಅವಧಿಯೊಳಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು.

ಅಧಿಕಾರೇತರ ಸದಸ್ಯರುಗಳು ರೂ.1000/-ಗಳ ಆಸೀನ ಶುಲ್ಕ ಪಡೆಯಲು ಅರ್ಹರಿರುತ್ತಾರೆ. ಕೇಂದ್ರ ಸ್ಥಾನವನ್ನು ಬಿಟ್ಟು ಹೊರಗಡೆಯಿಂದ ಬರುವ ಸದಸ್ಯರುಗಳಿಗೆ ದ್ವಿತೀಯ ದರ್ಜೆ ಎ/ಸಿ ರೈಲು ಪ್ರಯಾಣ ದರ ಅಥವಾ ಓಲ್ವೋ ಬಸ್ ಪ್ರಯಾಣ ದರಕ್ಕೆ ಸಮನಾಗಿರುವ ದರವನ್ನು ನೀಡಲಾಗುವುದು. ಸ್ಥಳೀಯ ಪ್ರಯಾಣಕ್ಕಾಗಿ ರೂ.1000/-ಗಳವರೆಗೆ ಮರುಪಾವತಿ ಮಾಡಲಾಗುವುದು.

ಈ ವೆಚ್ಚವನ್ನು2014-15ನೇ ಸಾಲಿನಲ್ಲಿ ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಲೆಕ್ಕಶೀರ್ಷಿಕೆ: 2515-00-101-0-26(ಯೋಜನೆ)ರಲ್ಲಿ ಒದಗಿಸಿರುವ ಅನುದಾನದಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ-1&2 (ಪ್ರ)
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**PR. 637**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ರಾಜ್ಯ ಯೋಜನಾ ಮಂಡಳಿಗೆ ಸದಸ್ಯ ಕಾರ್ಯದರ್ಶಿಯನ್ನು ನೇಮಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರು ದಿನಾಂಕ 16.06.2014 ರಂದು ಕಾರ್ಯವರದಿ ಮಾಡಿಕೊಂಡಿರುತ್ತಾರೆ. ರಾಜ್ಯ ಯೋಜನಾ ಮಂಡಳಿಯ ಕಾರ್ಯಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುವ ನಿಟ್ಟಿನಲ್ಲಿ ಆಡಳಿತಾತ್ಮಕ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಲು ಮಂಡಳಿಯ ಪೂರ್ಣಾವಧಿಯ ಸದಸ್ಯ ಕಾರ್ಯದರ್ಶಿಯನ್ನು ಹೊಂದಲು ನಿರ್ಧರಿಸಲಾಗಿದೆ. ಮಾನ್ಯ ಮುಖ್ಯ ಮಂತ್ರಿಗಳ ಹಾಗೂ ರಾಜ್ಯ ಯೋಜನಾ ಮಂಡಳಿಯ ಅಧ್ಯಕ್ಷರ ಸಮಾಲೋಚನೆಯೊಂದಿಗೆ ಮತ್ತು ಅನುಮೋದನೆಯೊಂದಿಗೆ ಶ್ರೀಮತಿ. ಬಿಧಿಷಾ ಚೌದರಿ, IES., ಅಪರ ಕಾರ್ಯದರ್ಶಿ, ರಾಜ್ಯ ಯೋಜನಾ ಮಂಡಳಿ ಇವರನ್ನು ಮಂಡಳಿಯ ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಕಾತಿ ಮಾಡಲು ತೀರ್ಮಾನಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೆಎಸ್‌ಪಿಬಿ/3/ಎಎಸ್/2014, ಬೆಂಗಳೂರು, ದಿನಾಂಕ: 04.08.2014**

ಶ್ರೀಮತಿ. ಬಿಧಿಷಾ ಚೌದರಿ, I.E.S., ಅಪರ ಕಾರ್ಯದರ್ಶಿ, ರಾಜ್ಯ ಯೋಜನಾ ಮಂಡಳಿ ಇವರು ತಮ್ಮ ಮೂಲ ವರ್ಗದಲ್ಲಿ ಹಿರಿಯ ಆಡಳಿತಾತ್ಮಕ ದರ್ಜೆಗೆ ದಿನಾಂಕ: 19.05.2014 ರ ಆದೇಶ ಸಂಖ್ಯೆ 13016/2/2014-IES., ರಲ್ಲಿ ಬಡ್ತಿ ಹೊಂದಿದ ಕಾರಣ ಈ ಹುದ್ದೆಯು ರಾಜ್ಯ ಸರ್ಕಾರದ

ಕಾರ್ಯದರ್ಶಿ ಮಟ್ಟದ ಹುದ್ದೆಗೆ ಸಮನಾಗಿರುತ್ತದೆ. ಇವರನ್ನು ದಿನಾಂಕ 16ರ ಜೂನ್ 2014ರಿಂದ ಜಾರಿಗೆ ಬರುವಂತೆ ರಾಜ್ಯ ಯೋಜನಾ ಮಂಡಳಿಯ ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಕಾತಿ ಮಾಡಲಾಗಿದೆ.

ಈ ಆದೇಶವನ್ನು ರಾಜ್ಯ ಯೋಜನಾ ಮಂಡಳಿಯ ಅಧ್ಯಕ್ಷರೂ ಆಗಿರುವ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಮೇರೆಗೆ ಹೊರಡಿಸಲಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಸ್. ಜಯದರ**

ಸರ್ಕಾರದ ಅಧೀನ ಕಾರ್ಯದರ್ಶಿ, ಎಸ್–3,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## PLANNING, PROGRAMME MONITORING AND STATISTICS SECRETARIAT

**Sub:** Appointment of Member Secretary, State Planning Board.

**Preamble:**

Deputy Chairman, State Planning Board has assumed charge on 16th June 2014. In order to effectively carry out the functions of the State Planning Board, it was decided to have a full time Member Secretary who will function as Administrative head of the Board. Accordingly it was decided to appoint Ms. Bidisha Chaudhuri, IES., Additional Secretary, State Planning Board as Member Secretary of the Board in consultation and with the approval of Hon'ble Chief Minister who is also the Chairman of State Planning Board.

Hence, this order.

**Government Order No. KSPB/MS/3/2014,Banglore, dated 4th August, 2014**

Ms.Bidisha Chaudhuri, I.E.S., Additional Secretary, State Planning Board, who has been promoted to Senior Administrative Grade in her parent cadre vide Order No.13016/2/2014-IES., dated 19.05.2014 which is equivalent to Secretary level in the State Government, is appointed as the Member Secretary, State Planning Board with effect from 16th June 2014.

This order is issued with the approval of Hon'ble Chief Minister and Chairman,State Planning Board.

By Order and in the Name of the Governor of Karnataka

**S.S.Jayadhar**

Under Secretary to Govt.S-3,

Planning, Programme Monitorting and Statistics Dept.

**PR. 638**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಉಲ್ಲೇಖ :**

1. ಆಯುಕ್ತರು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ನಪ್ರಾರಾ/ ತಾಂತ್ರಿಕ/ಕಛೇರಿ ಕಟ್ಟಡ/2014-15/ 198 ದಿನಾಂಕ: 13.06.2014
2. ಅಧೀಕ್ಷಕ ಅಭಿಯಂತರರು, ನಗರಾಭಿವೃದ್ಧಿ ಇಲಾಖೆ (ತಾಂತ್ರಿಕ ಕೋಶ) ರವರು ಕಡತ ಸಂಖ್ಯೆ:ನಅಇ 90 ಗುಅಪ್ರಾ 2014ರಲ್ಲಿ ನೀಡಿರುವ ಅಭಿಪ್ರಾಯ

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಪತ್ರಗಳಲ್ಲಿ ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕಿನ ಅಸ್ಕಿನಾಳ ಗ್ರಾಮದಲ್ಲಿ ಸರ್ವೆ ನಂ. 38/2,3,4 ಮತ್ತು ಸರ್ವೆ ನಂ.49ರಲ್ಲಿ ಪ್ರಾಧಿಕಾರದ ಕಛೇರಿ ಕಟ್ಟಡ ನಿರ್ಮಿಸಲು ರೂ.. 143.00 ಲಕ್ಷಗಳ ಅಂದಾಜು ಪಟ್ಟಿಗೆ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ರಾಯಚೂರು ರವರಿಂದ ರೂ. 143.00 ಲಕ್ಷಗಳ ಮೂಲ ಅಂದಾಜು ಪಟ್ಟಿಗೆ ತಾಂತ್ರಿಕ ಪರಿಶೀಲನೆಯೊಂದಿಗೆ ಮತ್ತು ಪ್ರಾಧಿಕಾರದ ದಿನಾಂಕ:28.06.2012 ರ ಸಭೆಯ ವಿಷಯ ಸಂಖ್ಯೆ:17ರ ತೀರ್ಮಾನದನ್ವಯ ರೂ.143.00 ಲಕ್ಷಗಳಲ್ಲಿ ಅಭಿವೃದ್ಧಿ ಪಡಿಸಲು ಅಂದಾಜು ಪಟ್ಟಿಯನ್ನು ತಯಾರಿಸಿ ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರನ್ವಯ ಅಧೀಕ್ಷಕ ಅಭಿಯಂತರರು, ನಗರಾಭಿವೃದ್ಧಿ ಇಲಾಖೆ ರವರು ಸದರಿ ಪ್ರಸ್ತಾವನೆಯ ಕುರಿತಂತೆ ಪ್ರಸ್ತಾಪಿತ ನಿವೇಶನದ ಅಳತೆ 3800 ಚ.ಮೀ.ಗಳಾಗಿದ್ದು, ನೆಲಮಹಡಿಯಲ್ಲಿ ಮಾತ್ರ ಕಟ್ಟಡ ನಿರ್ಮಿಸಲು ಯೋಜಿಸಿದ್ದು, ಕಟ್ಟಡದ ಪ್ಲಿಂತ್ ಏರಿಯಾ 681 ಚ.ಮೀ. ಗಳಿರುವ ನೀಲಿ ನಕ್ಷೆಗೆ ಆಯುಕ್ತರು ಸಹಿ ಮಾಡಿರುತ್ತಾರೆ. ಈ ಅಂದಾಜನ್ನು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ರವರು ತಾಂತ್ರಿಕವಾಗಿ ಪರಿಶೀಲಿಸಿರುತ್ತಾರೆ. ಈ ಅಂದಾಜನ್ನು ಲೋಕೋಪಯೋಗಿ ಇಲಾಖೆಯ ಬಳ್ಳಾರಿ ವೃತ್ತದ 2013-14 ನೇ ಸಾಲಿನ ದರಪಟ್ಟಿಯಂತೆ ಅಂದಾಜು ಪಟ್ಟಿಯನ್ನು ತಯಾರಿಸಲಾಗಿದೆ. ಈ ಅಂದಾಜು ಪಟ್ಟಿಯಲ್ಲಿ ಅನುವು ಮಾಡಿರುವ ಒಟ್ಟಾರೆ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತದೆ.

| Sl. No. | Name of works | Amt.Rs.in lakhs |
|---|---|---|
| 1 | Construction of Building | 128.89 |
| 2 | Electrical work 5% | 6.49 |

| Sl. No. | Name of works | Amt.Rs.in lakhs |
|---|---|---|
| 3 | Provision for water supply and sanitation | 6.49 |
| 4 | Solar System, rain water harvesting and unforeseen charges | 1.13 |
| | **Grand Total** | **143.00** |

ಮೇಲ್ಕಂಡ ರೂ. 143.00 ಲಕ್ಷಗಳ ಅಂದಾಜನ್ನು ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು ತಾಂತ್ರಿಕವಾಗಿ ಪರಿಶೀಲಿಸಿ ದೃಡೀಕರಿಸಿದ್ದು, ಸದರಿ ಅಂದಾಜಿನಲ್ಲಿ ಅವಶ್ಯಕ ಅಂಶಗಳನ್ನು ಅಳವಡಿಸಿಕೊಂಡು ಅಂದಾಜನ್ನು ತಯಾರಿಸಿರುವುದು ಕಂಡು ಬಂದಿರುವ ಪ್ರಯುಕ್ತ ರೂ. 143 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಬಹುದಾಗಿದೆ ಎಂದು ಅಭಿಪ್ರಾಯಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 90 ಗುಅಪ್ರಾ 2014 ಬೆಂಗಳೂರು, ದಿನಾಂಕ:28.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕಿನ ಅಸ್ಕಿನಾಳ ಗ್ರಾಮದ ಸರ್ವೆ ನಂ.38/2,3,4 ಮತ್ತು ಸರ್ವೆ ನಂ. 49ರಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಸ್ವಂತ ಕಛೇರಿ ಕಟ್ಟಡ ನಿರ್ಮಾಣದ ರೂ. 143.00 ಲಕ್ಷಗಳ (ನೂರ ನಲವತ್ತ ಮೂರು ಲಕ್ಷಗಳು ಮಾತ್ರ) ಕಾಮಗಾರಿಯ ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮುಖ್ಯ ಇಂಜಿನಿಯರರು, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ರವರು ಸದರಿ ಕಾಮಗಾರಿಯ ಕುರಿತು ವಿಧಿಸಿರುವ ಷರತ್ತುಗಳನ್ನು ಪಾಲಿಸುವುದು.

ಸದರಿ ಕಟ್ಟಡ ಕಾಮಗಾರಿಗೆ ಅಗತ್ಯವಿರುವ ಅನುದಾನವನ್ನು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ.ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**PR. 639**

## ಕೃಷಿ ಸಚಿವಾಲಯ
### ಸೇರ್ಪಡೆ

**ಸಂಖ್ಯೆ:ಕೃಇ/45/ಕೃಉಇ/2014, ಬೆಂಗಳೂರು, ದಿನಾಂಕ: 30-07-2014**

**ವಿಷಯ :** ಮಾರ್ಪಡಿಸಿದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2014ರ ಮುಂಗಾರು ಹಂಗಾಮಿನಲ್ಲಿ ಅನುಷ್ಠಾನಗೊಳಿಸಲು ಘಟಕವಾರು ಬೆಳೆಗಳ ಘೋಷಣೆ ಬಗ್ಗೆ- ಆದೇಶಗಳು.

**ಉಲ್ಲೇಖ :** ಸಮ ಸಂಖ್ಯೆಯ ಸರ್ಕಾರದ ಆದೇಶದ ದಿನಾಂಕ: 13.05.2014.

ಮಾರ್ಪಡಿಸಿದ ರಾಷ್ಟ್ರೀಯ ಕೃಷಿ ವಿಮಾ ಯೋಜನೆಯನ್ನು 2014ರ ಮುಂಗಾರು ಹಂಗಾಮಿನಲ್ಲಿ ಅನುಷ್ಠಾನಗೊಳಿಸಲು ಘಟಕವಾರು ಬೆಳೆಗಳ ಘೋಷಣೆ ಬಗ್ಗೆ ಉಲ್ಲೇಖಿತ ಆದೇಶದಲ್ಲಿ ಶಿವಮೊಗ್ಗ, ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಕೆಳಕಂಡ ಹೋಬಳಿ/ಗ್ರಾಮ ಪಂಚಾಯತಿಗಳ ಮುಂದೆ ಸೂಚಿಸಿರುವ ಬೆಳೆಯನ್ನು ಅಧಿಸೂಚನೆಯಲ್ಲಿ ಹೊಸದಾಗಿ ಸೇರ್ಪಡೆ ಮಾಡಿ ಆದೇಶಿಸಿದೆ.

| ಪುಟ ಸಂಖ್ಯೆ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು & ಕ್ರಮಸಂಖ್ಯೆ. | ಹೋಬಳಿಯ ಹೆಸರು & ಕ್ರಮಸಂಖ್ಯೆ | ಗ್ರಾಮ ಪಂಚಾಯತಿ ಹೆಸರು & ಕ್ರಮಸಂಖ್ಯೆ, ಸರ್ಕಾರದ ಆದೇಶದಲ್ಲಿ ನಮೂದಾಗಿರುವುದು. | ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೇರಿಸಬೇಕಾಗಿರುವ ಬೆಳೆ |
|---|---|---|---|---|---|
| **201** | **ಶಿವಮೊಗ್ಗ** | 6-ಸೊರಬ | 34-ಕುಪ್ಪಗಡ್ಡೆ | 217-ತವನಂದಿ | ಮುಸುಕಿನಜೋಳ(ಮಳೆಆಶ್ರಿತ) |

| ಪುಟ ಸಂಖ್ಯೆ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು & ಕ್ರಮಸಂಖ್ಯೆ. | ಹೋಬಳಿಯ ಹೆಸರು & ಕ್ರಮಸಂಖ್ಯೆ | ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೇರಿಸಬೇಕಾಗಿರುವ ಗ್ರಾಮ ಪಂಚಾಯತಿ ಹೆಸರು | ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೇರಿಸಬೇಕಾಗಿರುವ ಬೆಳೆ |
|---|---|---|---|---|---|
| 136 | ಧಾರವಾಡ | 4 ಕುಂದಗೋಳ | 9-ಕುಂದಗೋಳ | ಇಂಗಳಗಿ | ನೆಲಗಡಲೆ (ಶೇಂಗಾ) (ಮಳೆಆಶ್ರಿತ) |
| 81 | ಬೆಳಗಾವಿ | 7-ಖಾನಾಪುರ | 25-ಖಾನಾಪುರ | ಇಟಗಿ | ಭತ್ತ (ಮಳೆಆಶ್ರಿತ) |
| | | | 22-ಬೀಡಿ | ಕೇರವಾಡ | ಭತ್ತ (ಮಳೆಆಶ್ರಿತ) |
| | | | 22-ಬೀಡಿ | ನಂಜಲಕೂಡಲ | ಭತ್ತ (ಮಳೆಆಶ್ರಿತ) |
| | | | 24-ಜಾಂಬೋಟಿ | ನಾಗೋರ್ಡಾ | ಭತ್ತ (ಮಳೆಆಶ್ರಿತ) |

ಧಾರವಾಡ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ಈ ಕೆಳಗಿನ ನಗರಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮ/ನಗರಪ್ರದೇಶಗಳನ್ನು ಹಾಗೂ ಅವುಗಳ ಮುಂದೆ ಸೂಚಿಸಿರುವ ಬೆಳೆಗಳನ್ನು ಅಧಿಸೂಚನೆಯಲ್ಲಿ ಹೊಸದಾಗಿ ಸೇರ್ಪಡೆ ಮಾಡಿ ಆದೇಶ ಹೊರಡಿಸಲಾಗಿದೆ.

| **ಪುಟ ಸಂಖ್ಯೆ.** | **ಜಿಲ್ಲೆಯ ಹೆಸರು** | **ತಾಲ್ಲೂಕು ಹೆಸರು** | **ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೇರಿಸಬೇಕಾಗಿರುವ ನಗರ/ಪಟ್ಟಣ ಪ್ರದೇಶ/ಗ್ರಾಮಗಳ ಹೆಸರು** | **ಸರ್ಕಾರದ ಆದೇಶದಲ್ಲಿ ಹೊಸದಾಗಿ ಸೇರಿಸಬೇಕಾಗಿರುವ ಬೆಳೆ** |
|---|---|---|---|---|
| 97 | ಬಿಜಾಪುರ | ಬಸವನಬಾಗೇವಾಡಿ | ಬಾಗೇವಾಡಿ | ತೊಗರಿ (ಮಳೆಆಶ್ರಿತ) |
| | | ಬಿಜಾಪುರ | ಬಿಜಾಪುರ | ಸಜ್ಜೆ (ಮಳೆಆಶ್ರಿತ) |
| | | ಇಂಡಿ | ಇಂಡಿ | ತೊಗರಿ (ಮಳೆಆಶ್ರಿತ) |
| | | ಸಿಂದಗಿ | ಸಿಂದಗಿ | ತೊಗರಿ (ಮಳೆಆಶ್ರಿತ) |
| | | ಮುದ್ದೇಬಿಹಾಳ | ಮುದ್ದೇಬಿಹಾಳ | ತೊಗರಿ (ಮಳೆಆಶ್ರಿತ) |
| | | ಮುದ್ದೇಬಿಹಾಳ | ತಾಳಿಕೋಟಿ | ತೊಗರಿ(ಮಳೆಆಶ್ರಿತ) |
| 134 | ಧಾರವಾಡ | ಹುಬ್ಬಳ್ಳಿ | ಹುಬ್ಬಳ್ಳಿ–ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳು (ಬೈರಿದೇವರಕೊಪ್ಪ, ನಾಗಶೆಟ್ಟಿಕೊಪ್ಪ, ಗೋಪನಕೊಪ್ಪ, ಗಬ್ಬೂರ, ಯಲಾಪುರ, ಬೆಂಗೇರಿ, ಬಮ್ಮಾಪೂರ, ಸುತ್ತಗಟ್ಟಿ, ಗಾಮನಗಟ್ಟಿ, ಬಿಡ್ನಾಳ, ಎಂ.ವಿರಾಪುರ, ಉಣಕಲ್ಲ, ಅಮರಗೋಳ) | ನೆಲಗಡಲೆ (ಶೇಂಗಾ) (ಮಳೆಆಶ್ರಿತ) |

ಮುಂದುವರೆದು ಸದರಿ ಸರ್ಕಾರಿ ಆದೇಶ ಸಂಖ್ಯೆ:ಕೃಇ/45/ಕೃಉಇ/2014, ಬೆಂಗಳೂರು; ದಿನಾಂಕ:13.05.2014ರ ಪುಟ ಸಂಖ್ಯೆ:2ರಲ್ಲಿನ, ಆದೇಶದ ಭಾಗದ ಕ್ರಮಸಂಖ್ಯೆ:1ರಲ್ಲಿ **"ವಿವಿಧ ಬೆಳೆಗಳನ್ನು ಹೋಬಳಿ ಮತ್ತು ಗ್ರಾಮ ಪಂಚಾಯಿತಿ ಮಟ್ಟಕ್ಕೆ ಅಳವಡಿಸಿ"** ಎಂದಿರುವುದನ್ನು **"ವಿವಿಧ ಬೆಳೆಗಳನ್ನು ಹೋಬಳಿ ಮತ್ತು ಗ್ರಾಮ ಪಂಚಾಯಿತಿ ಮಟ್ಟಕ್ಕೆ (ತಾಲ್ಲೂಕುವಾರು ಮುಖ್ಯ ಬೆಳೆಗಳನ್ನು ಗ್ರಾಮ ಪಂಚಾಯಿತಿ ವ್ಯಾಪ್ತಿಯಿಂದ ಹೊರಗಿರುವ ಮತ್ತು ಪಟ್ಟಣ/ನಗರ ವ್ಯಾಪ್ತಿಗೆ ಸೇರುವ ಗ್ರಾಮಗಳನ್ನು ಸೇರಿಸಿದಂತೆ) ಅಳವಡಿಸಿ"** ಎಂದು ಸೇರ್ಪಡೆ ಮಾಡಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜ್ಯೋತಿ.ಆರ್.ಜೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಇಲಾಖೆ (ಯೋಜನೆ).

**PR. 640**

## ಶಿಕ್ಷಣ ಸಚಿವಾಲಯ

**ವಿಷಯ :** ಕಾಮೆಡ್–ಕೆ ಯಲ್ಲಿ ನಡೆಯುತ್ತಿರುವ 2ನೇ ಸುತ್ತಿನ ಸೀಟು ಹಂಚಿಕೆ ಪ್ರಕ್ರಿಯೆ ಮುಗಿದ ನಂತರ ಉಳಿಯುವ ಸೀಟುಗಳನ್ನು ರಾಜ್ಯ ಸಿ.ಇ.ಟಿ.ಗೆ. ಹಿಂದಿರುಗಿಸುವ ಬಗ್ಗೆ.

**ಓದಲಾಗಿದೆ :**

1. ಮಾನ್ಯ ಉನ್ನತ ಶಿಕ್ಷಣ ಹಾಗೂ ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:15.05.2014 ರಂದು ನಡೆದ ಸಭೆಯ ನಡವಳಿಗಳು.
2. ಸರ್ಕಾರಿ ಆದೇಶ ಸಂಖ್ಯೆ:ಇಡಿ 59 ಟಿಇಸಿ 2014, ದಿ:21.07.2014.
3. ಮಾನ್ಯ ಉನ್ನತ ಶಿಕ್ಷಣ ಹಾಗೂ ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:07.08.2014 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯದ ಖಾಸಗಿ ವೃತ್ತಿಪರ ಕಾಲೇಜುಗಳಲ್ಲಿನ ಆಡಳಿತ ಮಂಡಳಿಯ ಸೀಟುಗಳನ್ನು ಕಾಮೆಡ್–ಕೆ ಮೂಲಕ ಹಂಚಿಕೆ ಮಾಡಲಾಗುತ್ತಿದ್ದು. ಈ ಸಂಬಂಧವಾಗಿ ಸೀಟ್ ಬ್ಲಾಕಿಂಗ್ ಹಿನ್ನೆಲೆಯಲ್ಲಿ ಹೊರರಾಜ್ಯದ ನಕಲಿ ವಿದ್ಯಾರ್ಥಿಗಳು ಕಾಮೆಡ್_ಕೆ ಪರೀಕ್ಷೆಯಲ್ಲಿ ಭಾಗವಹಿಸಿರುವ ಆರೋಪದ ಮೇರೆಗೆ ದಾಖಲಾಗಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಮುಂದಿನ ಅಗತ್ಯಕ್ರಮ ತೆಗೆದುಕೊಳ್ಳುವ ನಿಟ್ಟಿನಲ್ಲಿ ದಿನಾಂಕ: 15.05.2014 ರಂದು ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ಸಭೆಯು ಜರುಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ನಡವಳಿಯನ್ವಯ ಯಾವುದೇ ವಿದ್ಯಾರ್ಥಿಗಳು ಸೀಟುಗಳನ್ನು ಪಡೆದು. ನಂತರ ಸದರಿ ಸೀಟುಗಳನ್ನು ಕಾಮೆಡ್_ಕೆ ಗೆ ಹಿಂತಿರುಗಿಸುವ ಪ್ರಕರಣಗಳಲ್ಲಿನ ಸತ್ಯಾಸತ್ಯೆಯನ್ನು ಸಂಬಂಧಪಟ್ಟ ಕೋರ್ಸುಗಳ ನಿರ್ದೇಶಕರು ಖಾತರಿಪಡಿಸಿಕೊಂಡ ನಂತರವಷ್ಟೇ ಅಂತಹ ಸೀಟುಗಳನ್ನು ಕಡ್ಡಾಯವಾಗಿ ರಾಜ್ಯ ಸಿ.ಇ.ಟಿ. ಮೂಲಕ ಅರ್ಹ ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಹಂಚಿಕೆ ಮಾಡಲು ಕ್ರಮವಹಿಸುವುದು ಸೂಕ್ತವೆಂದು ತೀರ್ಮಾನ ತೆಗೆದುಕೊಳ್ಳಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ಸರ್ಕಾರದ ಆದೇಶವನ್ನು ಹೊರಡಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಈ ಮೇಲೆ ತಿಳಿಸಲಾದಂತೆ **"**ವಿದ್ಯಾರ್ಥಿಗಳು ಕಾಮೆಡ್–ಕೆ ಗೆ ಹಿಂತಿರುಗಿಸಲಾಗುವ ಸೀಟುಗಳ ಸತ್ಯಾಸತ್ಯೆಯನ್ನು ಖಾತರಿಪಡಿಸಿಕೊಂಡು. ಅಂತಹ ಸೀಟುಗಳನ್ನು ರಾಜ್ಯ ಸಿ.ಇ.ಟಿ. ಮೂಲಕ ಹಂಚಿಕೆಮಾಡುವ ಸಲುವಾಗಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಹಿಂತಿರುಗಿಸುವಂತೆ**"** ಸೂಚಿಸುವುದಕ್ಕೆ ಬದಲಾಗಿ ಕಾಮೆಡ್–ಕೆ ಮೂಲಕ 2ನೇ ಸುತ್ತಿನ ನಂತರವೂ ಹಂಚಿಕೆಯಾಗದೇ ಬಾಕಿ ಉಳಿಯುವ ಸೀಟುಗಳನ್ನು ಹಿಂತಿರುಗಿಸುವಂತೆ ತಪ್ಪಾಗಿ ಆದೇಶಿಸಲಾಗಿದೆ.

ಈ ಎಲ್ಲಾ ವಿವರಗಳ ಹಿನ್ನೆಲೆಯಲ್ಲಿ ದಿನಾಂಕ: 07.08.2014 ರಂದು ನಡೆದ ಸಭೆಯಲ್ಲಿ ದಿನಾಂಕ: 21.07.2014 ರಂದು ಹೊರಡಿಸಲಾಗಿರುವ ಆದೇಶವನ್ನು ಹಿಂಪಡೆದು. ದಿನಾಂಕ: 15.05.2014 ರಂದು ನಡೆದ ಸಭೆಯ ತೀರ್ಮಾನಕ್ಕನುಗುಣವಾಗಿ ಪರಿಷ್ಕೃತ ಸರ್ಕಾರಿ ಆದೇಶವನ್ನು ಹೊರಡಿಸಲು ಕ್ರಮವಹಿಸುವಂತೆ ಮೇಲೆ ಕ್ರಮ ಸಂಖ್ಯೆ:(3) ರಲ್ಲಿ ಓದಲಾದ ಸಭಾ ನಡವಳಿಗಳನ್ವಯ ತೀರ್ಮಾನಿಸಲಾಗಿದೆ.

ಅದರಂತೆ. ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 59 ಟಿಇಸಿ 2014,ಬೆಂಗಳೂರು, ದಿನಾಂಕ: 8.08.2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ದಿನಾಂಕ:21.07.2014 ರಂದು ಹೊರಡಿಸಲಾಗಿರುವ ಸರ್ಕಾರದ ಆದೇಶವನ್ನು ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ. ಮುಂದುವರೆದು. ಯಾವುದೇ ವಿದ್ಯಾರ್ಥಿಗಳು ಕಾಮೆಡ್-ಕೆ ನಿಂದ ಪಡೆದ ಸೀಟುಗಳನ್ನು (ಎರಡನೇ ಸುತ್ತಿನ ನಂತರ) ಹಿಂತಿರುಗಿಸುವಿಕೆಯ ಕಾರಣಗಳ ಸತ್ಯಾಸತ್ಯೆಯನ್ನು ಸಂಬಂಧಪಟ್ಟ ಕೋರ್ಸುಗಳ ನಿರ್ದೇಶಕರುಗಳು (ವೈದ್ಯಕೀಯ/ದಂತ ವೈದ್ಯಕೀಯ ಶಿಕ್ಷಣ/ಇಂಜಿನಿಯರಿಂಗ್) ಖಾತರಿಪಡಿಸಿಕೊಂಡ ನಂತರ. ಅಂತಹ ಸೀಟುಗಳನ್ನು ರಾಜ್ಯ ಸಿ.ಇ.ಟಿ. ಮೂಲಕ ಹಂಚಿಕೆಮಾಡುವ ಸಲುವಾಗಿ ಕಾಮೆಡ್-ಕೆ ರವರು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಹಿಂತಿರುಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**PR. 641**
**S.C. 100**

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಶ್ರೀ ಜಗದಾಂಬಾ ಪ್ರಥಮ ದರ್ಜೆ ಕಲಾ ಹಾಗೂ ವಿಜ್ಞಾನ ಕಾಲೇಜು, ಹಿಟ್ಟನಳ್ಳಿ ತಾಂಡಾ ಈ ಕಾಲೇಜು ಹಾಗೂ ಅಲ್ಲಿನ ಬೋಧಕ/ಬೋಧಕೇತರರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 551 ಯು.ಪಿ.ಸಿ. 99 ದಿನಾಂಕ: 07.08.2003.
2. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 30 ಯು.ಪಿ.ಸಿ. 2008. ದಿನಾಂಕ: 13.05.2009.
3. ಸರ್ಕಾರಿ ಅಧಿಸೂಚನೆ ಸಂಖ್ಯೆ:ಇಡಿ 30 ಯು.ಪಿ.ಸಿ. 2008. ದಿನಾಂಕ: 05.10.2009.
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ:ಕಾಲೇಜು ಶಿಕ್ಷಣ ಇಲಾಖೆ/57/ಪಪಂಕಾ/ಧಾವಿ/2010-11/ನೇಪಾವಿ-2, ದಿನಾಂಕ: 26.11.2011 & 07.03.2014.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ:01.06.1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ: 01.06.1987 ರಿಂದ ದಿನಾಂಕ: 31.03.1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ: 18.02.2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01.06.1987 ರಿಂದ 31.03.1995ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ: 13.05.2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05.10.2009 ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01.06.1987 ರಿಂದ 31.03.1995ರ ಅವಧಿಯಲ್ಲಿ ಪ್ರಾರಂಭಿಸಿ ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4) ದಿನಾಂಕ: 26.11.2011 ಮತ್ತು ದಿನಾಂಕ: 07.03.2014ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ/ ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಆರ್ಥಿಕ ಇಲಾಖೆಗೆ ವೇತನಾನುದಾನಕ್ಕೆ ಒಳಪಡಿಸಲು ಅನುಮೋದನೆಗಾಗಿ ಸಲ್ಲಿಸಿದಾಗ ಆರ್ಥಿಕ ಇಲಾಖೆಯು ಆರ್ಥಿಕ ಹೊರೆ ಹೆಚ್ಚಾಗುವುದರಿಂದ ಹೆಚ್ಚಿನ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸಾಧ್ಯವಿಲ್ಲವೆಂದು ತಿಳಿಸಲಾಯಿತು. ನಂತರ ಸದರಿ ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ಮಂಡಿಸಲಾಗಿ ದಿನಾಂಕ: 18.01.2013 ರಂದು ಸಚಿವ ಸಂಪುಟವು ಪ್ರಸ್ತಾವನೆಯನ್ನು ಅನುಮೋದಿಸಿರುತ್ತದೆ. ಅದರಂತೆ ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ, ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 243 ಯುಪಿಸಿ 2011, ಬೆಂಗಳೂರು, ದಿನಾಂಕ: 14.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01.06.1987 ರಿಂದ 31.03.1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಶ್ರೀ ಜಗದಾಂಬಾ ಪ್ರಥಮ ದರ್ಜೆ ಕಲಾ

ಹಾಗೂ ವಿಜ್ಞಾನ ಕಾಲೇಜು, ಹಿಟ್ಟಿನಳ್ಳಿ ತಾಂಡಾ ಕಾಲೇಜನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

ಸದರಿ ಕಾಲೇಜನ್ನು ವಿಷಯವಾರು ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು / ಬೋಧಕೇತರರು ಹಾಗೂ ಅವರುಗಳು ಬೋಧಿಸುತ್ತಿರುವ ವಿಷಯ / ಹುದ್ದೆಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

**ಬೋಧಕರು**

| ಕ್ರ. ಸಂ. | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯ ಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಅಣ್ಣಾರಾಯ ಸಿದ್ದನಗೌಡ ಪಾಟೀಲ ದೇವಾನಂದ | ಸಮಾಜಶಾಸ್ತ್ರ ಉಪನ್ಯಾಸಕರು | ಜಿ.ಎಂ. | 01 | 16 ಗಂಟೆ | ಯುಜಿಸಿ |
| 2 | ಪೂಲ್ ಸಿಂಗ್ ಚವ್ಹಾಣ | ಸಮಾಜಶಾಸ್ತ್ರ ಉಪನ್ಯಾಸಕರು | ಪ.ಜಾ. | 01 | 16 ಗಂಟೆ | ಯುಜಿಸಿ |
| 3 | ಬಸಪ್ಪ ವೀರಭದ್ರಪ್ಪ ಬನ್ನೂರ | ಕನ್ನಡ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16 ಗಂಟೆ | ಯುಜಿಸಿ |
| 4 | ಭಾರತಿ ದಯಾಸಾಗರ ಪಾಟೀಲ | ರಸಾಯನಶಾಸ್ತ್ರ ಉಪನ್ಯಾಸಕರು | ಜಿ.ಎಂ. | 01 | 20 ಗಂಟೆ | ರಾಜ್ಯ ವೇತನ |
| 5 | ನಾಗಪ್ಪ ಪೀರಪ್ಪಾ ಕೋಟಿ | ಇತಿಹಾಸ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16 ಗಂಟೆ | ಯುಜಿಸಿ |
| 6 | ರವಿಕುಮಾರ್ ಪೂಲಸಿಂಗ್ ಚವ್ಹಾಣ | ಇಂಗ್ಲೀಷ್ ಉಪನ್ಯಾಸಕರು | ಪ.ಜಾ. | 01 | 16 ಗಂಟೆ | ಯುಜಿಸಿ |
| 7 | ಸುನೀತಾ ಗೋಪಿಚಂದ ಅಂಗಡಿ | ಗ್ರಂಥಪಾಲಕರು | ಪ.ಜಾ. | 01 | – | ಯುಜಿಸಿ |

**ಬೋಧಕೇತರರು**

| ಕ್ರ. ಸಂ. | ವೇತನಾನುದಾನಕ್ಕೆ ಒಳಪಡಿಸಿದ ಬೋಧಕೇತರರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ ಬಿಂದು |
|---|---|---|---|
| 1 | ರಾಘವೇಂದ್ರ | ಅಧೀಕ್ಷಕರು | ಅನ್ವಯಿಸುವುದಿಲ್ಲ |
| 2 | ಲಾಲ ಬಹದ್ದೂರ್ ಹರಸಿಂಗ ಚವ್ಹಾಣ | ಪ್ರಥಮ ದರ್ಜೆ ಸಹಾಯಕರು | ಅನ್ವಯಿಸುವುದಿಲ್ಲ |
| 3 | ಮೋತಿಲಾಲ ರಮಕೋಟಿ ಪೂಜಾರಿ | ದ್ವಿತೀಯ ದರ್ಜೆ ಸಹಾಯಕರು | ಪ.ಜಾ. |
| 4 | ಮಹಾದೇವ ರೂಪಸಿಂಗ್ ಲಮಾಣಿ | ದ್ವಿತೀಯ ದರ್ಜೆ ಸಹಾಯಕರು | ಜಿ.ಎಂ. |
| 5 | ಸುವರ್ಣಾ ಅಶೋಕ ರಾವ | ದ್ವಿತೀಯ ದರ್ಜೆ ಬೆರಳಚ್ಚುಗಾರರು | ಅನ್ವಯಿಸುವುದಿಲ್ಲ |
| 6 | ಮಮಿತಾ ಗೋಪಿಚಂದ ಅಂಗಡಿ | ಗ್ರಂಥಾಲಯ ಸಹಾಯಕರು | ಅನ್ವಯಿಸುವುದಿಲ್ಲ |
| 7 | ಗುರುಸಿದ್ಧಪ್ಪ ದೊಡ್ಡಪ್ಪ ಗಂಗನಳ್ಳಿ | ಪ್ರಯೋಗಾಲಯ ಸಹಾಯಕರು | ಜಿ.ಎಂ. |
| 8 | ಸುಖಲಾಲ ತುಕಾರಾಮ ರಾಠೋಡ | ಪ್ರಯೋಗಾಲಯ ಸಹಾಯಕರು | ಪ.ಜಾ. |
| 9 | ರೂಪ ಹೊಲ ಬಸಯ್ಯ ಬರಗಿ | ಪ್ರಯೋಗಾಲಯ ಸಹಾಯಕರು | ಜಿ.ಎಂ. |
| 10 | ಮೈಸೂರ ರೂಪಸಿಂಗ ರಾಠೋಡ | ಪರಿಚಾರಕ | ಪ.ಪಂ |
| 11 | ಕಾಂತು ಮಾನಸಿಂಗ ಚವ್ಹಾಣ | ಪರಿಚಾರಕ | ಪ.ಜಾ. |
| 12 | ಗಂಗಾಧರ ಕೇಸು ಚವ್ಹಾಣ | ಪರಿಚಾರಕ | ಜಿ.ಎಂ. |
| 13 | ಶ್ರೀಕಾಂತ ಭೀಮಸಿಂಗ ರಾಠೋಡ | ಪರಿಚಾರಕ | ಪ.ಜಾ. |

1. ಸಿಬ್ಬಂದಿಯ ಸೇವಾ ಭದ್ರತೆಯನ್ನು ಒದಗಿಸುವ ಬಗ್ಗೆ ಹೆಚ್.ಆರ್.ಎಂ.ಎಸ್ ನಲ್ಲಿ ಅಳವಡಿಸಿರುವುದನ್ನು ಖಚಿತಪಡಿಸಿಕೊಳ್ಳಬೇಕು.
2. ಸರ್ಕಾರದ ಆದೇಶ ಸಂಖ್ಯೆ: ಸಿ.ಆಸು.ಇ 08 ಸೆಹಿಮ 1995, ದಿನಾಂಕ: 20.06.1995ರನ್ವಯ ಮೀಸಲಾತಿ ಪಾಲಿಸಿರುವ ಬಗ್ಗೆ ಖಚಿತಪಡಿಸಿಕೊಂಡ ನಂತರ ಅನುದಾನ ಬಿಡುಗಡೆಗೊಳಿಸತಕ್ಕದ್ದು.

3. ಆರ್ಥಿಕ / ಶಿಕ್ಷಣ ಇಲಾಖೆ ನಿಗದಿಪಡಿಸಿರುವ ಎಲ್ಲಾ ಷರತ್ತುಗಳು/ನಿಯಮಗಳು/ ಅನುದಾನ ಸಂಹಿತೆಯಲ್ಲಿ ನಿಗದಿಪಡಿಸಿರುವ ಷರತ್ತುಗಳನ್ನು ಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳಬೇಕು.

4. The Karnataka Educational Institutions (Recruitment terms and conditions etc.. Rules 1999 ಅನುಬಂಧ-II ರಲ್ಲಿ benefits not available for service rendered during the un-aided period for purpose of fixation of pay. Leave and pension or any other service benefits by the Government. ಈ ನಿಯಮಗಳನ್ವಯ ಉಪನ್ಯಾಸಕರು ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಯಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ಉಪನ್ಯಾಸಕರುಗಳಿಂದ ರೂ.50/– ರ ಮುಚ್ಚಳಿಕೆ ಪತ್ರವನ್ನು ಸಂಬಂಧಿಸಿದ ಸಕ್ಷಮ ಪ್ರಾಧಿಕಾರವು ಬರೆಸಿಕೊಂಡು ನಂತರವೇ ಸಹಾಯಾನುದಾನಕ್ಕೆ ಒಳಪಡಿಸುವ ಬಗ್ಗೆ ಕ್ರಮ ವಹಿಸಲು ಆದೇಶಿಸಿದೆ.

5. ಆಡಳಿತ ಮಂಡಳಿಯಲ್ಲಿ ವ್ಯಾಜ್ಯ ಇರತಕ್ಕದ್ದಲ್ಲ. ಒಂದು ವೇಳೆ ಅಂತಹ ವ್ಯಾಜ್ಯ. ಇದ್ದಲ್ಲಿ ಅಂತಹ ಸಂಸ್ಥೆಯನ್ನು ಅನುದಾನಕ್ಕೆ ಒಳಪಡಿಸಲು ಅರ್ಹತೆ ಪಡೆಯುವುದಿಲ್ಲ.

6. ಕರ್ನಾಟಕ ಸಂಘಗಳ ನೋಂದಣಿ ನಿಯಮಾವಳಿಯಲ್ಲಿ ನಮೂದಿಸಿರುವ ಅವಕಾಶಗಳ ಪ್ರಕಾರ ಪ್ರತಿ ವರ್ಷ ಆಡಿಟ್ ನಡೆಸಿ ವರದಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಬೇಕು ಹಾಗೂ ಸಂಬಂಧಿಸಿದ ಆಯುಕ್ತರಿಗೆ ಮಾಹಿತಿಗಾಗಿ ಸಂಘದ ಕಾರ್ಯಕಾರಿ ಸದಸ್ಯರ ಅಧಿಕೃತ ಪಟ್ಟಿಯನ್ನು ಸಲ್ಲಿಸತಕ್ಕದ್ದು. ( ಸಕ್ಷಮ ಪ್ರಾಧಿಕಾರದಿಂದ ದೃಢೀಕರಿಸಲ್ಪಟ್ಟಿರಬೇಕು)

7. ಈ ಅನುಮೋದನೆಯು ಸರ್ಕಾರಿ ಆದೇಶ ಸಂಖ್ಯೆ: ಇಡಿ 146 ಯುಪಿಸಿ 1979, ದಿನಾಂಕ: 03.10.1981 ರಲ್ಲಿರುವಂತೆ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಅಂಗೀಕೃತ ಸಿಬ್ಬಂದಿ ನಮೂನೆಯಲ್ಲಿರತಕ್ಕದ್ದು ಹಾಗೂ ಈ ಬಗ್ಗೆ ಜಂಟಿ ನಿರ್ದೇಶಕರು ಜವಾಬ್ದಾರರಾಗುತ್ತಾರೆ.

8. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕ/ ಬೋಧಕೇತರರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

9. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ/ ಬೋಧಕೇತರರ ವೇತನವನ್ನು ಆದೇಶ ಹೊರಡಿಸಿ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

10. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

11. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು. 2003 ರ ನಿಯಮ 15(ಇ) ರಡಿಯಲ್ಲಿ ನಿಗಧಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು. ಪ್ರಯೋಗಾಲಯಗಳು. ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಜರೂರು ಒದಗಿಸತಕ್ಕದ್ದು.

13. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

14. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75 ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು, ತಪ್ಪಿದ್ದಲ್ಲಿ ವೇತಾನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

15. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

16. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

17. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



18. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಜರೂರಾಗಿ ಹೊಂದುವ ಷರತ್ತಿಗೆ ಒಳಪಟ್ಟಿದೆ.
19. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
20. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
21. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ/ಬೋಧಕೇತರ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
22. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ: ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
23. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕ/ಬೋಧಕೇತರರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.
24. ಆಡಳಿತ ಮಂಡಳಿಯವರು ಒಪ್ಪಂದದಲ್ಲಿನ ಹಾಗೂ ಮೇಲೆ ಹೇಳಲಾದ ಎಲ್ಲಾ ಅಥವಾ ಯಾವುದೇ ಒಂದು ಷರತ್ತು ನಿಬಂಧನೆಗಳನ್ನು ಉಲ್ಲಂಘಿಸಿದರೆ ಅಥವಾ ತಪ್ಪು ಲೆಕ್ಕ ಪತ್ರಗಳನ್ನು ಅಥವಾ ತಪ್ಪು ದಾಖಲೆಗಳನ್ನು ಒದಗಿಸಿದರೆ ಅಥವಾ ತಪ್ಪು ಮಾಹಿತಿಗಳನ್ನು ನೀಡಿದರೆ ಅಥವಾ ಯಾವುದೇ ಮೋಸ ಎಸಗಿರುವುದು ಕಂಡು ಬಂದಲ್ಲಿ ಸರ್ಕಾರವು ಆಡಳಿತ ಮಂಡಳಿಗೆ ಅಥವಾ ಸಿಬ್ಬಂದಿಗೆ ಈ ಕರಾರಿನ ಮೇರೆಗೆ ಈಗಾಗಲೇ ನೀಡಲಾದ ಪೂರ್ಣ ಅಥವಾ ಭಾಗಶಃ ಅನುದಾನವನ್ನು ಮುಂದುವರೆಸದಿರುವ ಅಥವಾ ತಡೆಹಿಡಿಯುವ ಹಾಗೂ ಈ ಕರಾರಿನ ಮೇರೆಗೆ ಸರ್ಕಾರಕ್ಕೆ ಬಾಕಿ ಎಂದು ಕಂಡು ಬಂದ ಮೊಬಲಗನ್ನು ಆಡಳಿತ ಮಂಡಳಿಯಿಂದ ವಸೂಲು ಮಾಡುವ ಅಧಿಕಾರವನ್ನು ಹೊಂದಿರುತ್ತದೆ.
25. ಆಡಳಿತ ಮಂಡಳಿಯು ಈ ಆದೇಶದ ಪ್ರಕಾರ (Document Sheet) ದಲ್ಲಿ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಕರಾರು ಪತ್ರವನ್ನು ನೀಡತಕ್ಕದ್ದು. ಈ ಕರಾರು ಪತ್ರವನ್ನು ನೀಡಿದ ನಂತರವೇ ಅನುದಾನ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳುವುದು.

ಪ್ರತಿ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳೂ, 1977 ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ).

**PR. 642**
**S.C. 200**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59